# ಬುಡ್ಗ ಜಂಗಮ ಸಮುದಾಯದ ಆರ್ಥಿಕ ಅಧ್ಯಯನ
## (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ
ಎಂ.ಫಿಲ್. ಸಂಪ್ರಬಂಧ)

ಸಂಶೋಧನಾರ್ಥಿ
ಪರಮೇಶ್ವರಗೌಡ
ನೋಂದಣಿ ಸಂಖ್ಯೆ : ೧೭೦೧೧೨೦೩೦೦೯

ಮಾರ್ಗದರ್ಶಕರು
ಡಾ.ಕೆ.ಎಂ. ಮೇತ್ರಿ
ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು
ಡಾ.ವೈ.ಎಸ್. ವಗ್ಗಿ
ಸಹಾಯಕ ಪ್ರಾಧ್ಯಾಪಕರು
ಅರ್ಥಶಾಸ್ತ್ರ ಅಧ್ಯಯನ ವಿಭಾಗ
ಎಸ್.ಕೆ.ಎನ್.ಜಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಗಂಗಾವತಿ



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೬-೧೭

# ಬುಡ್ಗ ಜಂಗಮ ಸಮುದಾಯದ ಆರ್ಥಿಕ ಅಧ್ಯಯನ

## (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ
ಎಂ.ಫಿಲ್. ಸಂಪ್ರಬಂಧ)


ಸಂಶೋಧನಾರ್ಥಿ

**ಪರಮೇಶ್ವರಗೌಡ**

**ನೋಂದಣಿ ಸಂಖ್ಯೆ : ೧೭೦೧೧೨೦೩೦೦೧೯**





ಮಾರ್ಗದರ್ಶಕರು

**ಡಾ.ಕೆ.ಎಂ. ಮೇತ್ರಿ**

ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು

**ಡಾ.ವೈ.ಎಸ್. ವಗ್ಗಿ**

ಸಹಾಯಕ ಪ್ರಾಧ್ಯಾಪಕರು
ಅರ್ಥಶಾಸ್ತ್ರ ಅಧ್ಯಯನ ವಿಭಾಗ
ಎಸ್.ಕೆ.ಎನ್.ಜಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಗಂಗಾವತಿ





ಸಮಾಜ ವಿಜ್ಞಾನಗಳ ನಿಕಾಯ

**ಬುಡಕಟ್ಟು ಅಧ್ಯಯನ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೧೭-೧೮

# ಸಂಶೋಧಕರ ಪ್ರಮಾಣ ಪತ್ರ

**"ಬುಡ್ಗ ಜಂಗಮ ಸಮುದಾಯದ ಆರ್ಥಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ.ಕೆ.ಎಂ. ಮೇತ್ರಿ ಅವರ ಮಾರ್ಗದರ್ಶನದಲ್ಲಿ ಹಾಗೂ ಸಹಾಯಕ ಪ್ರಾಧ್ಯಾಪಕರಾದ ಡಾ.ವೈ.ಎಸ್. ವಗ್ಗಿ ಅವರ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

(ಪರಮೇಶ್ವರಗೌಡ)
ಸಂಶೋಧನಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ :

ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

**ಪರಮೇಶ್ವರಗೌಡ** ಅವರು **"ಬುಡ್ಗ ಜಂಗಮ ಸಮುದಾಯದ ಆರ್ಥಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಸಂಪ್ರಬಂಧವನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**(ಡಾ.ಕೆ.ಎಂ. ಮೇತ್ರಿ)**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸಹ ಮಾರ್ಗದರ್ಶಕರು

**(ಡಾ.ವೈ.ಎಸ್. ವಗ್ಗಿ)**
ಸಹಾಯಕ ಪ್ರಾಧ್ಯಾಪಕರು
ಅರ್ಥಶಾಸ್ತ್ರ ಅಧ್ಯಯನ ವಿಭಾಗ
ಎಸ್.ಕೆ.ಎನ್.ಜಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಗಂಗಾವತಿ

ದಿನಾಂಕ :

ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ಪ್ರಸ್ತಾವನೆ

"ಬುಡ್ಗ ಜಂಗಮರು ಮೂಲತ ಆಂಧ್ರ ಪ್ರದೇಶದ ಶ್ರೀಶೈಲ ಅರಣ್ಯ ಭಾಗಗಳಲ್ಲಿ ಬೇಟೆಯನ್ನೆ ಪ್ರಧಾನವಾಗಿ ಇಟ್ಟುಕೊಂಡು ನೆಲೆಸಿದರು. ಬುಡ್ಗ ಜಂಗಮರು ತಾವು ತಂದ ಮಾಂಸಹಾರದ ಸ್ವಲ್ಪ ಭಾಗವನ್ನು ಶಿವನಿಗೆ ಭಕ್ತಿಯಿಂದ ಸಮರ್ಪಿಸಿ ತಾವು ಊಟ ಮಾಡುವುದು ಸಂಪ್ರದಾಯ ಎಂದು ಶ್ರೀ ಕಾಳಹಸ್ತಿ ಮಹಾತ್ಮಮು ಎಂಬ ಪುಸ್ತಕದಲ್ಲಿ ಉಲ್ಲೇಖಿಸಲಾಗಿದೆ. ಎನ್ ಆರ್ ವೆಂಕಟೇಶಂ ಅವರು ವೃತ್ತಿ, ಆಹಾರದ ಸಲುವಾಗಿ ಬೇಟೆಯನ್ನು ಆಧಾರವಾಗಿಟ್ಟು ಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾ ಇಂದಿನವರೆಗೆ ಈ ಸಮುದಾಯವು ಅಲೆಮಾರಿಯಾಗಿ ಕಂಡುಬರುತ್ತದೆ. ಇವರು ಕಾಡಿನಿಂದ ಚದುರಿ ಮಹಾರಾಷ್ಟ್ರ, ಕರ್ನಾಟಕ, ಇನ್ನಿತರ ರಾಜ್ಯಗಳಿಗೆ ವಲಸೆ ಹೋಗಿರುವರು. ತಮ್ಮ ಸಂಚಾರಿ ಜೀವನದ ವಿವಿಧ ವೃತ್ತಿಗಳನ್ನು ಕಂಡುಕೊಂಡಿರುತ್ತಾರೆ.

ಬುಡ್ಗ ಜಂಗಮರು ಜೀವನದಲ್ಲಿ ಅನೇಕ ವೃತ್ತಿಗಳಲ್ಲಿ ಬದಲಾವಣೆಗಳು ಕಾಣಲಾಯಿತು. ಆಂಧ್ರ ಪ್ರದೇಶ, ಕರ್ನಾಟಕದಲ್ಲಿ ೧೨ನೇ ಶತಮಾನದಲ್ಲಿ ಬಸವಣ್ಣನ ಅನುಯಾಯಿಗಳು ಇವರನ್ನು ಧರ್ಮ ಪ್ರಚಾರಕ್ಕೆ ಬಳಸಿಕೊಂಡರು, ಶಿವಾಜಿ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಇವರನ್ನು ಗುಡಾಚಾರಿಗಳಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಕಾಡಿನಲ್ಲಿ ಸಣ್ಣ-ಪುಟ್ಟ ಸಮುದಾಯಗಳ ಒಳಜಗಳ ಮತ್ತು ನಿಜಾಮ್ ಮತ್ತು ಆಂಗ್ಲರ ದಬ್ಬಾಳಿಕೆಗಳನ್ನು ಸಹಿಸದೆ ಇಡೀ ಸಮುದಾಯವು ಅನೇಕ ತಿರುವುಗಳನ್ನು ಕಂಡಿತ್ತು. ಕಾಡಿನಿಂದ ನಾಡಿನತ್ತ ಮರಳುವ ಸಂದರ್ಭದಲ್ಲಿ ಹೊಟ್ಟೆಪಾಡಿಗಾಗಿ ಸಾಂಸ್ಕೃತಿಕ ವೇಷಗಳನ್ನು ಹಾಕಿಕೊಂಡು ಒಂದೊಂದು ತಂಡವಾಗಿ ಊರಲ್ಲಿ ಪ್ರವೇಶ ಮಾಡಿ ಆ ಕಾಲದ ಘಟನೆಗಳು ಮತ್ತು ಧಾರ್ಮಿಕ ಪ್ರಚಾರವನ್ನು ತಮ್ಮ ವೇಷ ಮತ್ತು ಕಲಾ ಪ್ರಕಾರಗಳ ಮೂಲಕ ದೇಶದ ಜನತೆಗೆ ತಿಳಿಸುತ್ತ ಭಿಕ್ಷಾಟನೆ ಅರಿಸಿ ಹೋದರು. ಕಲೆಯನ್ನು ಪ್ರದರ್ಶನ ನೀಡುತ್ತಾ ಹೋದರು. ಪ್ರಮುಖವಾಗಿ ಕರ್ನಾಟಕ, ಮಹಾರಾಷ್ಟ್ರ, ಮಧ್ಯಪ್ರದೇಶ, ತಮಿಳುನಾಡು, ಗೋವಾ ರಾಜ್ಯಗಳಲ್ಲಿ ಪ್ರಾದೇಶಿಕ ಭಾಷೆಗಳಲ್ಲಿ

ಕಲೆಯನ್ನು ಪ್ರದರ್ಶಿಸುತ್ತಾ ಜೀವನ ಸಾಗಿಸುತ್ತಿದ್ದಾರೆ." (ಬುಡ್ಗ ಜಂಗಮ, ಬಾಲಗುರುಮೂರ್ತಿ ಪ್ರತಾಪ ಆರ್ ಬಹುರೂಪಿ, ಪುಟ ಸಂಖ್ಯೆ ೧೧)

ಬುಡ್ಗ ಜಂಗಮರ ಮೂಲ, ಬುಡ್ಗ ಜಂಗಮ್ ಪದದ ಅರ್ಥ ವಿವರಣೆ, ಬುಡ್ಗ ಜಂಗಮರ ವೃತ್ತಿ, ಪ್ರವೃತ್ತಿ, ಹಿನ್ನೆಲೆ ಇವುಗಳ ಬಗ್ಗೆ ಆಂಧ್ರಪ್ರದೇಶದ ಬುಡ್ಗ ಜಂಗಮರ ಕುರಿತು ಅಧ್ಯಯನ ಮಾಡಿದ ಡಾ.ಎನ್.ಆರ್. ವೆಂಕಟೇಶಂ ಅವರು ಬುಡಗ ಸಮುದಾಯದೊಂದಿಗೆ ಮಾಡಿದ ಸಂದರ್ಶನ ವಿವರಗಳನ್ನು ನೀಡಲಾಗಿದೆ. "ಬುಡಗ" ಈ ಪದವು ಬುಡಿಗ>ಬುಡ್ಗ> ಬುಡಗ>ಬುರ್ರ ಆಗಿ ಪರಿವರ್ತನೆಗೊಂಡಿದೆ. ಬುಡುಗ ಅಥವಾ ಬುರ್ರ ವಾದ್ಯಕ್ಕೆ ಸಂಬಂಧಿಸಿದ ಪದವಾಗಿದೆ. ಬುಡಗ ಅಥವಾ ಬುರ್ರವನ್ನು ಬಾರಿಸುತ್ತಾ ಹೇಳುವ ಕಥನ ಗೀತೆಗಳಿಗೆ ಬುರ್ರ ಕಥೆಗಳೆಂದು ಕರೆಯುತ್ತಾರೆ. ಇವುಗಳನ್ನು ಹಾಡುವ ಜನರಿಗೆ ಬುಡ್ಗ ಜಂಗಮರೆಂದು ಕರೆಯುತ್ತಾರೆ.

"ಬುಡ್ಗ ಜಂಗಮ ಸಮುದಾಯವನ್ನು ಜನಪದರು, ಇವರು ಪ್ರದರ್ಶಿಸುವ ವೃತ್ತಿ ಕಲೆಗಳಿಗೆ ಹಗಲು ವೇಷಗಾರರು, ವೇಷಗಾರರು, ಬಹುರೂಪಿಗಳು, ಬಾಳಸಂತ, ಬೈರಾಗಿ, ಬುರ್ರಕಥೆಯವರು, ಸನ್ಯಾಸಿಗಳು, ಬೀದಿ ಭಾಗವತ ಕಥೆ ಹೇಳುವರು, ಬಾವಚಗಳು, ಸಿದ್ದರು, ಕೊಂಡಮಾಮ, ಶಾಸ್ತ್ರ ಹೇಳುವವರೂ ಜಂಗಾಲರು, ಜಗ್ಗಾಲಿ ಇತ್ಯಾದಿ ಹೆಸರುಗಳಿಂದ ಈ ಸಮುದಾಯವನ್ನು ಕರೆಯುತ್ತಾರೆ." (ಹಗಲುವೇಷದವರ ಸಂಸ್ಕೃತಿ, ಯಳನಾಡು ಆಂಜಿನಪ್ಪ, ಪುಟ ಸಂಖ್ಯೆ ೧೯)

ಆಯಾ ಪ್ರಾಂತಕನುಗುಣವಾಗಿ ಕಲಾ ಪ್ರದರ್ಶನ ಮಾಡುವ ಮೇಲ್ಕಂಡ ಕಾಯಕದವರನ್ನು ವಿಭಿನ್ನ ಹೆಸರುಗಳಿಂದ ದಾಖಲಿಸಿರುವುದರಿಂದ ಸಮುದಾಯದ ನಿಜ ಸ್ವರೂಪ ಹೊರಹೊಮ್ಮಿಲ್ಲ. ಈ ಸಮುದಾಯವು ಸಮಾಜದಲ್ಲಿ ಶೈಕ್ಷಣಿಕವಾಗಿ, ಸಮಾಜದ ಸ್ಥಿರತೆಯಲ್ಲಿ ಮತ್ತು ಆರ್ಥಿಕತೆಯಲ್ಲಿ ಕೆಳಹಂತದಲ್ಲಿ ಇದೆ ಎಂದು ನೋಡಲಾಗಿದೆ.

### ೧.೧. ಅಧ್ಯಯನದ ಉದ್ದೇಶ

೧. ಕೊಪ್ಪಳ ಜಿಲ್ಲೆಯ ಚಾರಿತ್ರಿಕ, ಭೌಗೋಳಿಕ ಹಿನ್ನೆಲೆ ತಿಳಿಯುವುದು.

೨. ಬುಡ್ಗ ಜಂಗಮ ಸಮುದಾಯದ ಸಾಮಾಜಿಕ ಹಿನ್ನೆಲೆಯನ್ನು ತಿಳಿಯುವುದು.

೩. ಬುಡ್ಗ ಜಂಗಮ ಸಮುದಾಯದ ಆರ್ಥಿಕ ಸ್ಥಿತಿಯನ್ನು ತಿಳಿಯುವುದು.

೪. ಪ್ರಸ್ತುತ ಸಂದರ್ಭದಲ್ಲಿ ಬುಡ್ಗ ಜಂಗಮ ಸಮುದಾಯದ ಆರ್ಥಿಕತೆಯ ರೂಪಾಂತರವನ್ನು ತಿಳಿಯುವುದು.

### ೧.೨. ಅಧ್ಯಯನದ ವ್ಯಾಪ್ತಿ

ಸಂಶೋಧಕನು ಒಂದು ಅಧ್ಯಯನವನ್ನು ಪರಿಪೂರ್ಣವಾಗಿ ಅಥವಾ ಸ್ಪಷ್ಟ ಮತ್ತು ವಸ್ತುನಿಷ್ಟವಾಗಿ ಎಲ್ಲಾ ಆಕಾರಗಳನ್ನೊಳಗೊಂಡಂತೆ ಸಂಶೋಧನಾ ಕಾರ್ಯ ನಿರ್ವಹಿಸಬೇಕಾದರೆ ಅಧ್ಯಯನಕ್ಕೊಂದು ನಿರ್ದಿಷ್ಟವಾದ ವ್ಯಾಪ್ತಿ, ಸರಹದ್ದು ಅವಶ್ಯಕ. ಈ ದೃಷ್ಟಿಯಿಂದ 'ಬುಡ್ಗ

ಜಂಗಮ ಸಮುದಾಯದ ಆರ್ಥಿಕ ಅಧ್ಯಯನ' ಎಂಬ ಸಂಪ್ರಬಂಧವನ್ನು, ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲ್ಲೂಕಿನ ಕುದರಿಮೋತಿ ಮತ್ತು ಗಂಗಾವತಿ ತಾಲ್ಲೂಕಿನ ಸಿದ್ಧಾಪುರ ಗ್ರಾಮಗಳನ್ನು ಆಯ್ದುಕೊಂಡಿದ್ದೇನೆ. ಈ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅವರ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ಅವರು ನೀಡಿದ ಮಾಹಿತಿಯ ಮೇಲೆ ಈ ಸಂಪ್ರಬಂಧವನ್ನು ರಚಿಸಲಾಗಿದೆ.

### ೧.೩. ಸಂಶೋಧನ ವಿಧಾನಗಳು

* **ಐತಿಹಾಸಿಕ ವಿಧಾನ:** ಬುಡಕಟ್ಟು ಸಮುದಾಯವು ಇಡೀ ರಾಜ್ಯದಲ್ಲಿಯೇ ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ಲಕ್ಷ್ಯ ಮನೋಭಾವವನ್ನು ಹೊಂದಿದೆ. ಇಂತಹ ಸಮುದಾಯ ಹುಟ್ಟು ಬೆಳವಣಿಗೆ ಜೊತೆಗೆ ಈ ಸಮುದಾಯದಲ್ಲಿ ಮೂಲ ಕಸುಬುಗಳು ರೂಢಿಯಲ್ಲಿವೆ. ಮದುವೆ ಆಚರಣೆಯಲ್ಲಿ ಮತ್ತು ಶವಸಂಸ್ಕಾರದ ಆಚರಣೆಯಲ್ಲಿ ಈ ಸಮುದಾಯವು ಬಹಳ ಪ್ರಾಮುಖ್ಯತೆಯನ್ನು ಹೊಂದಿದೆ. ಆದ್ದರಿಂದ ಐತಿಹಾಸಿಕವಾಗಿ ವಿವಿಧ ರೀತಿಯ ಮಾಹಿತಿ ಪಡೆದುಕೊಂಡು ಅಧ್ಯಯನ ವಿಷಯಕ್ಕೆ ಶಕ್ತಿ ತುಂಬಿ ಸಂಪ್ರಬಂಧವನ್ನು ಕಟ್ಟಿಕೊಡುವಂತಹ ಪ್ರಯತ್ನ ಮಾಡಲಾಗಿದೆ.

* **ಅವಲೋಕನ ವಿಧಾನ:** ಬುಡ್ಗ ಜಂಗಮ ಸಮುದಾಯವನ್ನು ಕುರಿತು ಮಾಹಿತಿ ಪಡೆಯಲು ಕ್ಷೇತ್ರಕಾರ್ಯದಲ್ಲಿ ಅವಲೋಕನ ವಿಧಾನವು ಮುಖ್ಯವಾದುದು. ಅವಲೋಕನವು ಸಾಮಾಜಿಕ ಸಂಶೋಧನೆಯಲ್ಲಿ ಮಾಹಿತಿ ಸಂಗ್ರಹಣೆಗಾಗಿ ಬಳಸಲಾಗುತ್ತಿರುವ ಮುಖ್ಯ ತಂತ್ರ ಸಾಧನಗಳಲ್ಲೊಂದು. ಪ್ರಶ್ನಾವಳಿ ಮತ್ತು ಸಂದರ್ಶನ ಅವಧಿಯಲ್ಲಿ ಕಂಡುಬರಬಹುದಾದ ಕೆಲವು ಸಮಸ್ಯೆಗಳನ್ನು ಅವಲೋಕನದ ಮೂಲಕ ಬಗೆಹರಿಸಿಕೊಳ್ಳಲು ಸಾಧ್ಯವಾಗುತ್ತದೆ. ಬುಡಕಟ್ಟು ಸಮುದಾಯದವರ ಜೊತೆಯಲ್ಲಿ ಸಹಭಾಗಿಯಾಗಿ ಸಮುದಾಯದ ಅಂತರಾಳದಲ್ಲಿ ಹುದುಗಿರುವ ಮಾಹಿತಿ ಮತ್ತು ಇವರ ಬದುಕಿನ ಸವಾಲುಗಳನ್ನು ಕುರಿತು ಮಾಹಿತಿಯನ್ನು ತಿಳಿದು ಅಧ್ಯಯನಕ್ಕೆ ಪೂರಕವಾಗಿ ರೂಪಿಸಿಕೊಳ್ಳಬಹುದು.

* **ಪ್ರಶ್ನಾವಳಿ ವಿಧಾನ:** ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯ ಅವಲೋಕನೆಯಿಂದ ಬುಡಕಟ್ಟು ಸಮುದಾಯದವರ ಅಧ್ಯಯನ ಮಾಡಲು ಮತ್ತು ಮಾಹಿತಿಯನ್ನು ಪಡೆಯಲು ಪ್ರಶ್ನಾವಳಿಯು ಪ್ರಮುಖ ಪಾತ್ರ ವಹಿಸುತ್ತದೆ. ಅಧ್ಯಯನದ ಮುಖ್ಯ ಉದ್ದೇಶಗಳಿಗೆ ಅನುಗುಣವಾಗಿ ವಿವಿಧ ಆಯಾಮಗಳನ್ನು ಹಲವಾರು ಪ್ರಶ್ನೆಗಳನ್ನು ಹೊಂದಿರುವ ಸೂಕ್ತ ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲಾಗುವುದು. ಆ ಮೂಲಕ ಸಮುದಾಯದವರ ಮುಖಾಮುಖಿ ಸಂದರ್ಶನ ಮಾಡಿ ಮಾಹಿತಿಯನ್ನು ಸಂಗ್ರಹಣೆ ಮಾಡಲಾಗುವುದು. ಈ ಮೂಲಕ ಬುಡಕಟ್ಟು ಸಮುದಾಯದ ವಾಸ್ತವ ಚಿತ್ರಣವನ್ನು ಅಧ್ಯಯನದಲ್ಲಿ ಕಂಡುಕೊಳ್ಳಬಹುದು.

* **ಸಂದರ್ಶನ ವಿಧಾನ:** ಸಂದರ್ಶನ ವಿಧಾನ ಎನ್ನುವುದು ಸಾಮಾಜಿಕ ಸಂಶೋಧನೆಯ ಕ್ಷೇತ್ರದಲ್ಲಿ ಮಾಹಿತಿ ಸಂಗ್ರಹಿಸಲು ಹೆಚ್ಚು ಪರಿಣಾಮಕಾರಿ ಹಾಗೂ ಯಶಸ್ವಿಯಾದ ವಿಧಾನವಾಗಿದೆ. ಸಂದರ್ಶನ ಎಂದ ಕೂಡಲೇ ಕೇವಲ ಪರಿಭಾಷೆಯಲ್ಲಿ ಇದು ಅಭಿಪ್ರಾಯವನ್ನು ವಿನಿಮಯ ಮಾಡಿಕೊಳ್ಳುವ ಮತ್ತು ಮಾಹಿತಿಯನ್ನು ಸಂಗ್ರಹಿಸುವ ಉದ್ದೇಶವಾಗಿದೆ. ಸಂಪೂರ್ಣ ಮಾಹಿತಿಯನ್ನು ಪಡೆಯುವುದರ ಸಲುವಾಗಿ ಸಮುದಾಯದವರನ್ನು ವೈಯಕ್ತಿಕವಾಗಿ ಸಂದರ್ಶಿಸಿ ಮಾಹಿತಿ ಪಡೆಯಲಾಗುವುದು.

## ೧.೪. ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ

**ಯಳನಾಡು ಅಂಜನಪ್ಪನವರು** 'ಹಗಲು ವೇಷದವರ ಸಂಸ್ಕೃತಿ' ಎಂಬ ತಮ್ಮ ಪುಸ್ತಕದಲ್ಲಿ ಹಗಲುವೇಷ ಹಾಕುವ ಜನರನ್ನು ಬುಡ್ಗ ಜಂಗಾಲರು ಎಂದು ಕರೆಯುತ್ತಾರೆ.

**ಮರುವೂರು ಕೋದಂಡರಾಮರೆಡ್ಡಿ** ಅವರು ಬರೆದ 'ಮಾಂಡಲಿಕ ಪದಕೋಶಂ' ಎಂಬ ಗ್ರಂಥದಲ್ಲಿ ಇವರನ್ನು ವಿವರಿಸುತ್ತಾ 'ತಂದಾನ' ಕಥೆಗಳನ್ನು ಹೇಳಿ ಜೀವಿಸುವ ಬುರ್ರಕಥೆಯವರು ಹಾಗೂ 'ಬುಡಗೇಲು' ವಾದ್ಯವನ್ನು ನುಡಿಸುತ್ತಾ ಭಿಕ್ಷೆ ಎತ್ತುವವರೇ 'ಬುಡ್ಗ ಜಂಗಾಲು' ಜಾತಿಯವರು ಎಂದು ತಿಳಿಸುತ್ತಾರೆ.

**ಪ್ರೊ.ಬಿ. ರಾಮರಾಜು** ಅವರು ತಮ್ಮ 'ತೆಲುಗು ಜಾನಪದ ಗೇಯ ಸಾಹಿತ್ಯಂ' ಎಂಬ ಕೃತಿಯಲ್ಲಿ ಬುಡಿಗೆ ಎಂಬ ವಾದ್ಯವನ್ನು ನುಡಿಸುತ್ತಾ ಕಥೆ ಹೇಳುವ ಜನರನ್ನು ಬುಡ್ಗ ಜಂಗಾಲರು ಎಂದು ಕರೆದಿದ್ದಾರೆ.

**ಎಡ್ಗರ್ ಥರ್‌ಸ್ಟನ್** ಅವರು ಹಗಲುವೇಷದವರನ್ನು ಕುರಿತು ಹೀಗೆ ಬರೆಯುತ್ತಾರೆ. ತಿರುಪತಿಯ ಗಂಗಮ್ಮ ಎನ್ನುವ ದೇವತೆಯ ಗೌರವಾರ್ಥ ನಡೆಯುವ ವಾರ್ಷಿಕ ಜಾತ್ರೆಯಲ್ಲಿ ಪ್ರತಿ ದಿನ ಬೆಳಗ್ಗೆ ಸಂಜೆ ಬೈರಾಗಿ, ಸರ್ಪ ಮುಂತಾದ ಬೇರೆ ಬೇರೆ ವೇಷ ಧರಿಸಿ ಭಿಕ್ಷೆ ಎತ್ತುವ ತೆಲುಗು ಭಿಕ್ಷುಕ ವರ್ಗವನ್ನು ಹಗಲು ವೇಷದವರು ಎಂದು ಇವರು ದಾಖಲಿಸಿದ್ದಾರೆ.

## ೧.೫. ಅಧ್ಯಯನದ ಸ್ವರೂಪ

ಬುಡ್ಗ ಜಂಗಮ್ ಸಮುದಾಯದ ಆರ್ಥಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ) ಎನ್ನುವ ಅಧ್ಯಯನವನ್ನು ಕೊಪ್ಪಳ ಜಿಲ್ಲೆಯಲ್ಲಿ ಕೈಗೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವನ್ನು ಪ್ರಮುಖವಾಗಿ ಆರು ಅಧ್ಯಾಯಗಳಾಗಿ ವರ್ಗೀಕರಿಸಲಾಗಿದೆ. ಅಧ್ಯಾಯಗಳು ಈ ಕೆಳಗಿನಂತಿವೆ.

* ಅಧ್ಯಾಯ ಒಂದು ಪ್ರಸ್ತಾವನೆ ಮತ್ತು ಉದ್ದೇಶ, ಅಧ್ಯಯನದ ವ್ಯಾಪ್ತಿ, ಸಂಶೋಧನಾ ವಿಧಾನಗಳು, ಇದುವರೆಗೂ ನಡೆದ ಅಧ್ಯಯನದ ಸಮೀಕ್ಷೆ, ಅಧ್ಯಯನದ ಸ್ವರೂಪ ಇವುಗಳನ್ನು ಒಳಗೊಂಡಿದೆ.

* ಅಧ್ಯಾಯ ಎರಡರಲ್ಲಿ ಭೌಗೋಳಿಕ ಹಿನ್ನೆಲೆ, ಸಾಂಸ್ಕೃತಿಕ ಮತ್ತು ಐತಿಹಾಸಿಕ ಹಿನ್ನೆಲೆ ಮತ್ತು ಜನಸಂಖ್ಯೆಯ ವಿವರ ಒಳಗೊಂಡಿದೆ.

* ಅಧ್ಯಾಯ ಮೂರರಲ್ಲಿ ಬುಡ್ಗ ಜಂಗಮರ ಪದ ನಿಷ್ಪತ್ತಿ ಮತ್ತು ಸಾಂಸ್ಕೃತಿಕ, ಐತಿಹಾಸಿಕ ಹಿನ್ನೆಲೆ, ಸಾಮಾಜಿಕ ಸ್ಥಿತಿಗತಿ, ಜೀವನಾವರ್ತಕ ಆಚರಣೆಗಳು ಮತ್ತು ವಾರ್ಷಿಕ ಆಚರಣೆಗಳನ್ನು ಒಳಗೊಂಡಿದೆ.

* ಅಧ್ಯಾಯ ನಾಲ್ಕರಲ್ಲಿ ಕಲೆ (ಹಗಲು ವೇಷಗಾರಿಕೆ ಮತ್ತು ಬುರ್ರಕಥ) ಮತ್ತು ಆರ್ಥಿಕತೆ ಇತ್ಯಾದಿ ಇವುಗಳನ್ನು ಒಳಗೊಂಡಿದೆ.

* ಅಧ್ಯಾಯ ಐದರಲ್ಲಿ ಕಲಾ ಪೋಷಣೆಯ ಕೊರತೆ, ಪಾರಂಪರಿಕ ವೃತ್ತಿಯ ಪಲ್ಲಟ, ಸರಕಾರದ ಯೋಜನೆಗಳು ಈ ಅಧ್ಯಾಯದಲ್ಲಿ ನೋಡಲಾಗಿದೆ.

* ಅಧ್ಯಾಯ ಆರರಲ್ಲಿ ಫಲಿತಗಳು ಮತ್ತು ಪರಿಹಾರಗಳನ್ನು ತಿಳಿಸಲಾಗುವುದು.

**ಅಡಿಟಿಪ್ಪಣಿಗಳು**

೧. ಬಾಲಗುರುಮೂರ್ತಿ ಪ್ರತಾಪ್ ಆರ್ ಬಹುರೂಪಿ, ೨೦೦೮, ಬುಡ್ಗ ಜಂಗಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨. ಯಳನಾಡು ಆಂಜಿನಪ್ಪ, ೧೯೯೩, ಹಗಲುವೇಷದವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.



# ಅಧ್ಯಾಯ: ಎರಡು

# ಕೊಪ್ಪಳ ಜಿಲ್ಲೆಯ ಪರಿಚಯ

## ೨.೧. ಭೌಗೋಳಿಕ ಹಿನ್ನೆಲೆ

ಹಿಂದುಳಿದ ಪ್ರದೇಶವೆಂದು ಹಣಿಪಟ್ಟಿ ಕಟ್ಟಿಕೊಂಡಿರುವ ಹೈದರಬಾದ್ ಕರ್ನಾಟಕಕ್ಕೆ ಸೇರಿರುವ ಕೊಪ್ಪಳ ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದಲ್ಲಿದೆ. ಕೊಪ್ಪಳ ಜಿಲ್ಲೆಯು ೧೫°.೨೧° ಉತ್ತರ ಅಕ್ಷಾಂಶ ೭೬°.೯೦° ಪೂರ್ವ ರೇಖಾಂಶದಿಂದ ೧೫°.೩೫° ಉತ್ತರ ಅಕ್ಷಾಂಶ ೪೬°.೧೫° ಪೂರ್ವರೇಖಾಂಶಗಳ ಮಧ್ಯೆ ಕೇಂದ್ರೀಕೃತವಾಗಿದೆ.

ಈ ಜುಲ್ಲೆಯು ತುಂಗಭದ್ರ ನದಿಗೆ ಸಮೀಪದಲ್ಲಿದ್ದು ಈ ಜಿಲ್ಲೆಯು ಕೆಲವು ಪ್ರದೇಶಗಳು ನೀರಾವರಿಗೆ ಒಳಪಟ್ಟಿವೆ. ಒಟ್ಟು ೭.೧೯೦ ಚ.ಕಿ.ಮೀ. ಮತ್ತು ವಿಸ್ತೀರ್ಣ ಹೊಂದಿದೆ. ಕೊಪ್ಪಳ ಜಿಲ್ಲೆಯು ೨೦೦೧ರ ಜನಗಣತಿ ಪ್ರಕಾರ, ೧,೧೯೬,೦೮೯ ಜನಸಂಖ್ಯೆಯನ್ನು ಹೊಂದಿದೆ. ಪ್ರತಿ ಚದರ ಕಿ.ಮೀ. ೧೬೬ರಷ್ಟು ಜನಸಾಂದ್ರತೆಯನ್ನು ಹೊಂದಿರುವ ಕೊಪ್ಪಳ ಜಿಲ್ಲೆಯು ಪೂರ್ವ ದಿಕ್ಕಿನಲ್ಲಿ ರಾಯಚೂರು ಮತ್ತು ಪಶ್ಚಿಮದಲ್ಲಿ ಗದಗ ಉತ್ತರದಲ್ಲಿ ಬಾಗಲಕೋಟೆ ಮತ್ತು ದಕ್ಷಿಣದಲ್ಲಿ ಬಳ್ಳಾರಿ ಮತ್ತು ತುಂಗಭದ್ರ ನದಿಯನ್ನು ಹೊಂದಿದೆ. ಕೊಪ್ಪಳ ಜಿಲ್ಲೆಯು ತ್ರಿಕೋನಾಕೃತಿಯಲ್ಲಿದ್ದು ಅದರ ಉತ್ತರ ತುದಿಯು ವಿಸ್ತೃತವಾಗಿದ್ದರೆ, ದಕ್ಷಿಣದ ತುದಿಯು ಚೂಪಾಗಿದೆ. ಕೊಪ್ಪಳ, ಗಂಗಾವತಿ, ಯಲಬುರ್ಗಾ ಮತ್ತು ಕುಷ್ಟಗಿ ಎಂಬ ನಾಲ್ಕು ತಾಲೂಕು ಕೇಂದ್ರಗಳನ್ನು ಹೊಂದಿದೆ. ಕೊಪ್ಪಳ ಜಿಲ್ಲೆಯು ೨೦ ಹೋಬಳಿಗಳನ್ನು ೬೨೯ ಗ್ರಾಮಗಳನ್ನು ಹೊಂದಿರುವ ಜಿಲ್ಲೆಯಾಗಿದೆ. (www.koppal nic.in. march-2008)

## ಕೊಪ್ಪಳ ಜಿಲ್ಲೆಯ ಮೇಲ್ಮೈ ಲಕ್ಷಣ

ಕೊಪ್ಪಳ ಜಿಲ್ಲೆಯು ಪ್ರಾಕೃತಿಕವಾಗಿ ಬಯಲುಸೀಮೆ ಪ್ರದೇಶವಾಗಿದ್ದು, ಕಲ್ಲುಬಂಡೆಗಳಿಂದ ಹಾಗೂ ಅಲ್ಲಲ್ಲಿ ಕುರುಚಲು ಗಿಡಗಳಿಂದ ಹಾಗೂ ಬೆಟ್ಟ ಗುಡ್ಡಗಳಿಂದ ಕೂಡಿದೆ. ಕುಷ್ಟಗಿ ಮತ್ತು ಯಲಬುರ್ಗಾ ತಾಲ್ಲೂಕುಗಳಲ್ಲಿ ಗ್ರಾನೈಟ್ ಕಲ್ಲುಗಳ ನಿಕ್ಷೇಪಗಳಿದ್ದರೆ, ಕೊಪ್ಪಳ ಮತ್ತು ಗಂಗಾವತಿ ತಾಲ್ಲೂಕುಗಳಲ್ಲಿ ಕಟ್ಟಡ ಕಟ್ಟಲು ಉಪಯೋಗಿಸುವ ಕಲ್ಲುಗಳ ನಿಕ್ಷೇಪಗಳಿವೆ. ಜಿಲ್ಲೆಯಲ್ಲಿ ಅರಣ್ಯ ಪ್ರದೇಶವು ಅತಿ ಕಡಿಮೆಯಾಗಿದ್ದು, ಒಟ್ಟು ಭೌಗೋಳಿಕ ವಿಸ್ತೀರ್ಣದ

ಶೇಕಡ ೫ರಷ್ಟಿದೆ. ಕೊಪ್ಪಳ ಜಿಲ್ಲೆಯು ಮರುಳು ಮಿಶ್ರಿತ ಕೆಂಪು ಮಣ್ಣು, ಕಪ್ಪು ಮಣ್ಣು ಹಾಗೂ ಜೇಡಿಮಣ್ಣಿನ ರಚನೆಯಿಂದ ಕೂಡಿದೆ. ತುಂಗಭದ್ರದ ಎಡದಂತೆ ಕಾಲುವೆಯಿಂದ ಗಂಗಾವತಿ ತಾಲೂಕಿನ ಅರ್ಧ ಭಾಗ ಮತ್ತು ಕೊಪ್ಪಳ ತಾಲ್ಲೂಕಿನ ಸ್ವಲ್ಪ ಭಾಗ ನೀರಾವರಿ ಪ್ರದೇಶವಾಗಿರುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ವಾಡಿಕೆಯಂತೆ ಸರಾಸರಿ ೫೭೨.೦೦ ಮಿ.ಮೀ. ಮಳೆಯಾಗುತ್ತದೆ. ೨೦೦೮ರಲ್ಲಿ ೫೫೭.೨ ಮಿ.ಮೀ. ಮಳೆಯಾಗಿದೆ. ೨೦೦೯ರಲ್ಲಿ ವರ್ಷಕ್ಕಿಂತ ಅಧಿಕ ಪ್ರಮಾಣದಲ್ಲಿ ಮಳೆಯಾಗಿ ನೆರೆಹಾವಳಿಗೆ ಒಳಗಾದ ಜಿಲ್ಲೆಯಾಗಿತ್ತು. ಈ ಪ್ರದೇಶದಲ್ಲಿ ಉದ್ಯೋಗವಕಾಶ, ಸಾರಿಗೆ ಸೌಲಭ್ಯ ಇತ್ಯಾದಿ ಮೂಲಬೂತ ಸೌಕರ್ಯಗಳು ಕಡಿಮೆ ಇರುವುದರಿಂದ ಕೃಷಿ ಚಟುವಟಿಕೆಯೇ ಇಲ್ಲಿಯ ಜನರ ಮುಖ್ಯ ಉದ್ಯೋಗವಾಗಿದೆ. ಇತ್ತೀಚಿಗೆ ನಿರ್ಮಾಣ ಉದ್ಯಮ ಇಲ್ಲಿ ಬೆಳೆಯುತ್ತಿರುವುದರಿಂದ ಕಟ್ಟಡ ನಿರ್ಮಾಣ ಮತ್ತು ಇತರೆ ನಿರ್ಮಾಣ ಕೆಲಸದಲ್ಲಿ ದುಡಿಯುತ್ತಿರುವ ಕಾರ್ಮಿಕರ ಸಂಖ್ಯೆಯು ಹೆಚ್ಚುತ್ತದೆ.

ಒಣ ಭೂಮಿ ಮತ್ತು ನೀರಾವರಿ ಪ್ರದೇಶವನ್ನು ಹೊಂದಿರುವ ಕೊಪ್ಪಳ ಜಿಲ್ಲೆಯಲ್ಲಿ ಮುಸುಕಿನ ಜೋಳ, ಭತ್ತ, ಜೋಳ, ಸಜ್ಜೆ, ದ್ವಿದಳ ಧಾನ್ಯಗಳು, ಎಣ್ಣೆ ಬೀಜಗಳು, ಹತ್ತಿ, ಕಬ್ಬು ಮತ್ತು ತೃಣ ಧಾನ್ಯಗಳನ್ನು ಬೆಳೆಯಲಾಗುತ್ತದೆ. ಇಲ್ಲಿನ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ಆಹಾರ ಪದ್ಧತಿಯು ಬೆಳಿದಿದ್ದು ಅನ್ನ ಮತ್ತು ರೊಟ್ಟಿ ಇಲ್ಲಿನ ಜನರ ಮುಖ್ಯ ಆಹಾರವಾಗಿದೆ. ಭತ್ತ, ಜೋಳ ಮತ್ತು ಸಜ್ಜೆ ಮುಖ್ಯ ಆಹಾರದ ಬೆಳೆಗಳಾಗಿವೆ.

ಕರ್ನಾಟಕದ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಕೊಪ್ಪಳ ಜಿಲ್ಲೆಯ ವಿಸ್ತೀರ್ಣವು ಶೇಕಡ ೨.೯೦ರಷ್ಟಿದ್ದು ಇದು ರಾಜ್ಯದಲ್ಲಿ ಭೌಗೋಳಿಕ ವಿಸ್ತೀರ್ಣದಲ್ಲಿ ೧೮ನೇ ಸ್ಥಾನವನ್ನು ಹೊಂದಿದೆ ಎಂದು ತಿಳಿಯಲಾಗಿದೆ.

### ೨.೨. ಸಾಂಸ್ಕೃತಿಕ ಹಿನ್ನೆಲೆ

"ಕೊಪ್ಪಳ ಜಿಲ್ಲೆಯು ಕೊಪ್ಪಳ, ಗಂಗಾವತಿ, ಯಲಬುರ್ಗಾ, ಕುಷ್ಟಗಿ ತಾಲ್ಲೂಕುಗಳನ್ನು ಒಳಗೊಂಡು ಪ್ರಾಚೀನ ಕಾಲದಿಂದ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಒಂದು ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಅಲ್ಲಿಯ ರಾಜಕೀಯ, ಧಾರ್ಮಿಕ, ಸಾಮಾಜಿಕ ಸಾಹಿತ್ಯ ಮತ್ತು ವಾಸ್ತುಶಿಲ್ಪಗಳ ಹಿನ್ನೆಲೆಯನ್ನು ನೋಡಲಾಗುತ್ತದೆ.

ಕೊಪ್ಪಳ ನಾಡಿನ ಚರಿತ್ರೆಯನ್ನು ಪುರಾಣ ಕಾಲದೊಂದಿಗೆ ತಳಕು ಹಾಕಲು ಈ ಜನರಲ್ಲಿ ಬೇರೂರಿಬಂದಿರುವ ಹಲವಾರು ನಂಬಿಕೆಗಳು ಉದಾಹರಣೆಗಳಾಗಿವೆ. ಅಲ್ಲದೆ, ಈ ನಾಡು ನೂತನ ಶಿಲಾಯುಗ, ಬೃಹತ್ ಶಿಲಾಯುಗದ ಕಾಲದಲ್ಲೂ ಪ್ರಸಿದ್ಧಿ ಪಡೆದಿದ್ದ ಬಗ್ಗೆ ದೊರೆತಿರುವ ಹಲವಾರು ನೆಲೆಗಳ ಆಧಾರವನ್ನು ಒದಗಿಸುತ್ತದೆ. ಅಲ್ಲಿಂದ ಮುಂದೆ ಚರಿತ್ರೆಯ ಕಾಲಕ್ಕೆ ಬಂದರೆ ಅಶೋಕನ ಎರಡು ಶಾಸನಗಳು ಕೊಪ್ಪಳದಲ್ಲಿಯೇ ದೊರೆತಿರುವುದು ಈ ನಾಡು ಅಂದಿನ ಕಾಲದಲ್ಲಿ ಹೊಂದಿದ್ದ ಪ್ರಸಿದ್ಧಿಯನ್ನು ಸಾರುತ್ತವೆ ಎಂದು ಹೇಳಬಹುದು.

ಕೊಪ್ಪಳದ ಸಾಂಸ್ಕೃತಿಕ ಇತಿಹಾಸವನ್ನು ಹೇಳಬೇಕೆಂದರೆ ಪ್ರಾಗಿತಿಹಾಸ ಬೇರೆ ಐತಿಹಾಸಿಕ ಸ್ಥಳಗಳ ಇತಿಹಾಸದ ಮಹತ್ವಕ್ಕಿಂತಲೂ ಒಂದು ಹೆಜ್ಜೆ ಮುಂದಿದೆ. ಇಲ್ಲಿಯ ಸಾಂಸ್ಕೃತಿಕ ಪರಿಸರ ಬಹು ವೈಭವದ ದಿನಗಳನ್ನು ಹೊಂದಿತ್ತು. ವಿವಿಧ ರಾಜ ಮನೆತನಗಳನ್ನು ಆಳ್ವಿಕೆಯಲ್ಲಿ ಸಾಂಸ್ಕೃತಿಕ ಪರಿಸರ ವಿಜೃಂಭಣೆಯಿಂದಿತ್ತು.

ನಗರದ ಪ್ರಾಚೀನತೆಗೆ ಸಾಕ್ಷಿ ಎಂಬಂತೆ ಇಲ್ಲಿನ ಕೋಟೆ, ಅಶೋಕನ ಶಿಲಾಶಾಸನಗಳು, ಮಳೆ ಮಲ್ಲೇಶ್ವರ ದೇವಸ್ಥಾನ, ಗವಿಮಠದ ಗುಹಾ ಚಿತ್ರಗಳು ಇಲ್ಲಿದೆ. ಇಲ್ಲಿ ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ರಾಜ್ಯಭಾರ ನಡೆಸಿದ್ದರು ಎನ್ನುವ ಕುರಿತು ಇತಿಹಾಸವಿದೆ. ಸಹಜವಾಗಿಯೇ ಈ ಎಲ್ಲಾ ಮನೆತನಗಳು ಮತ್ತು ರಾಜರು ಕಲೆಗೆ, ಸಾಹಿತ್ಯಕ್ಕೆ ಸಂಸ್ಕೃತಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದರು, ಕೊಪ್ಪಳವು ಒಂಭತ್ತನೆಯ ಶತಮಾನದ ಹೊತ್ತಿಗೆ ಜೈನರ ಕಾಶಿ ಎಂದು ಖ್ಯಾತಿಯಾಗಿತ್ತು.

ವಿವಿಧ ಕಾಲಘಟ್ಟಗಳಲ್ಲಿ ವಿವಿಧ ಸಾಂಸ್ಕೃತಿಕಗಳ ನೆಲೆವೀಡಾಗಿದ್ದ ಕೊಪ್ಪಳ ಒಂದು ಕಾಲದಲ್ಲಿ ಜೈನರ ಮತ್ತು ಬೌದ್ಧ ಧರ್ಮದ ದಕ್ಷಿಣದ ಭಾರತದ ಬಹುಮುಖ್ಯ ಕೇಂದ್ರಸ್ಥಾನವಾಗಿತ್ತು. ಇಲ್ಲಿರುವ ಎರಡು ಅಶೋಕನ ಶಿಲಾಶಾಸನಗಳು, ಬೌದ್ಧ ವಿಹಾರಗಳು, ಬೌದ್ಧರ ಪ್ರಮುಖ ಕೇಂದ್ರಗಳು, ಬೌದ್ಧ ಧರ್ಮದ ಕೆಲವೊಂದು ಐತಿಹಾಸಿಕ ಸ್ಥಳಗಳು ಈ ನೆಲದಲ್ಲಿ ಕಾಣಸಿಗುತ್ತವೆ.

ಕೊಪ್ಪಳವು ಒಂದೇ ರಾಜರ ಮನೆತನದ ಆಳ್ವಿಕೆಗೆ ಬರದೆ ವಿವಿಧ ಕಾಲಘಟ್ಟಗಳಲ್ಲಿ ವಿವಿಧ ರಾಜಮನೆತನಕ್ಕೆ ಸಂಬಂಧಿಸಿದಂತೆ ಆಯಾ ಸಂಸ್ಕೃತಿ, ಕಲೆ, ವಾಸ್ತುಶಿಲ್ಪ, ಶಿಲ್ಪಕಲೆ, ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ಐತಿಹಾಸಿಕ ನೆಲೆವೀಡಾಗಿತ್ತು ಎಂಬುವುದರಲ್ಲಿ ಎರಡು ಮಾತಿಲ್ಲ. ಇಷ್ಟೊಂದು ಐತಿಹಾಸಿಕ ಸಾಂಸ್ಕೃತಿಕ ಪರಂಪರೆಯ ಹಿರಿಮೆಯನ್ನು ಪಡೆದ ಕೊಪ್ಪಳ ಇತಿಹಾಸದಲ್ಲಿ ತನ್ನ ಸಾಂಸ್ಕೃತಿಕ ವರ್ಣನೆಯನ್ನು ಹೊಂದಿದೆ ಎಂದು ತಿಳಿಯಲಾಗಿದೆ." (ಡಾ.ಬಿ.ವಿ. ಶಿರೂರು, 'ಕೊಪ್ಪಳ ಜಿಲ್ಲಾ ದರ್ಶನ', ಪುಟ ಸಂಖ್ಯೆ ೯)

ಕೊಪ್ಪಳ ಸಾಂಸ್ಕೃತಿಕ ಮತ್ತು ವಾಸ್ತುಶಿಲ್ಪದ ಕಲೆ ಇತಿಹಾಸದಲ್ಲಿ ಒಂದು ಅದ್ಭುತವಾದ ಸೃಷ್ಟಿಯಾಗಿದೆ. ಇತಿಹಾಸಕಾರರು ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲ್ಲೂಕಿನಲ್ಲಿರುವ ಇಟ್ಟಗಿ ಎಂಬ ಗ್ರಾಮದಲ್ಲಿ ಮಹಾಮಾದೇಶ್ವರ ದೇವಾಲಯವಿದ್ದು ಇದರ ವಾಸ್ತುಶಿಲ್ಪಕಲೆಯನ್ನು ಕಂಡು ಜಗತ್ತಿನ ಎಲ್ಲಾ ದೇವಾಲಯಗಳ ಚಕ್ರವರ್ತಿ ದೇವಾಲಯವೆಂದು ಬಿರುದನ್ನು ನೀಡಿದ್ದಾರೆ. ಇದು ಕೊಪ್ಪಳ ಜಿಲ್ಲೆಯ ಸಾಂಸ್ಕೃತಿಕ ಮತ್ತು ಶಿಲ್ಪಕಲೆಯನ್ನು ಬಿಂಬಿಸುವ ದೇವಾಲಯವಾಗಿದೆ.

ಕರ್ನಾಟಕದ ಇತಿಹಾಸದಲ್ಲಿ ಕೊಪ್ಪಳ ಜಿಲ್ಲೆಯು ತನ್ನದೆಯಾದ ಸಾಂಸ್ಕೃತಿಕ ಕಲೆ, ಸಾಹಿತ್ಯ, ವಾಸ್ತುಶಿಲ್ಪಕಲೆಯಿಂದ ಗುರಿತಿಸಿಕೊಂಡಿದೆ.

**ಐತಿಹಾಸಿಕ ಹಿನ್ನೆಲೆ**

"ಕೊಪ್ಪಳವು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ ಪ್ರಸಿದ್ಧ ಸ್ಥಳವಾಗಿದೆ. ಇದನ್ನು ಜೈನರ ಪವಿತ್ರ ಯಾತ್ರಾಸ್ಥಳವಾಗಿಯೂ ಪ್ರಾಮುಖ್ಯತೆಯನ್ನು ಪಡೆದಿದೆ. ಭಾರತದ ಪ್ರಸಿದ್ಧ ಚಕ್ರವರ್ತಿ ಅಶೋಕನ ಕಾಲದ ಎರಡು ಶಾಸನಗಳು ಪಾಲ್ಕಿಗೊಂಡು ಮತ್ತು ಗವಿಮಠ ಕೊಪ್ಪಳದಲ್ಲಿ ದೊರೆತಿವೆ. ಭಾರತದ ಮೊದಲ ಸಾಮ್ರಾಜ್ಯ ಮೌರ್ಯರ ಕಾಲದಲ್ಲಿ ಅವರ ಆಡಳಿತಕ್ಕೆ ಒಳಪಟ್ಟು ಪ್ರಸಿದ್ಧಿಯನ್ನು ಹೊಂದಿದ ನಗರವಾಗಿತ್ತು. ಇಲ್ಲಿ ದೊರೆತ ಶಾಸನಗಳು ಇದರ ಪ್ರಕಾರ ಕೊಪ್ಪಳದ ಇತಿಹಾಸವನ್ನು ಕ್ರಿಸ್ತ ಪೂರ್ವಕ್ಕೆ ಕೊಂಡ್ಯೊಯ್ಯುತ್ತದೆ. ಅಲ್ಲದೆ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಚಕ್ರವರ್ತಿ ಅಶೋಕ ಎಂದು ಸ್ಪಷ್ಟಪಡಿಸುತ್ತದೆ. ಕೊಪ್ಪಳವು ಕಲ್ಯಾಣ ಚಾಲುಕ್ಯರ ಮಾಂಡಲಿಕರಾದ 'ಶಿಲಹಾರರ' ಕೇಂದ್ರ ಸ್ಥಳ ಅಥವಾ ರಾಜಧಾನಿಯಾಗಿ ಮೆರೆದ ಬಗ್ಗೆ ಇತಿಹಾಸ ತಿಳಿಸುತ್ತದೆ." (www.koppal.nic.in ಅಂತರಜಾಲ ಮಾಹಿತಿ)

"ಈ ಪ್ರದೇಶದಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಇತರೆ ಅರಸು ಮನೆತನಗಳೊಂದಗೆ ಸಂಬಂಧ ಇಟ್ಟುಕೊಂಡಿರುವುದನ್ನು ಚರಿತ್ರೆ ಸ್ಪಷ್ಟಪಡಿಸುತ್ತದೆ. ಅರಸು ಮನೆತನಗಳಿಗೆ ಚಕ್ರಾಧಿಪತಿಗಳಿಗೆ ಸೇರಿದ ಶಾಸನಗಳಲ್ಲಿ ಸಾಹಿತ್ಯ ಕೃತಿಗಳಲ್ಲಿ ತಾಮ್ರ ಪತ್ರಗಳಲ್ಲಿ ಕೊಪ್ಪಳದ ಉಲ್ಲೇಖ ಸಿಗುತ್ತದೆ.

ಕೊಪ್ಪಳವನ್ನು ಶಿಲಾಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ಕೂಪಣ ತೀರ್ಥ, ಆದಿತೀರ್ಥ, ಮಹಾತೀರ್ಥ, ಕೂಪಣಾಚಲ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. "ಕೂಪಣಾ" ಎಂಬ ಸ್ಥಳವು ಪ್ರಾಚೀನ ಕಾಲದಿಂದಲೂ ಜೈನರ ಪವಿತ್ರ ಯಾತ್ರಾಸ್ಥಳವಾಗಿತ್ತೆಂದು ರನ್ನ ರಚಿಸಿದ ಜೈನ ಕೃತಿ ತಿಳಿಸುತ್ತದೆ. ಆ ಕೃತಿಯಲ್ಲಿ ಪ್ರಸ್ತಾಪವಾಗಿರುವ ಕೂಪಣ ಅಥವಾ ಕೂಪಣಾಚಲ ಎಂಬ ಪ್ರದೇಶವು ಕೊಪ್ಪಳ ಎಂಬುದೇ ಆಗಿದೆ. ೧೩ನೇ ಶತಮಾನಕ್ಕೆ ಸೇರಿದ ಹರಿಹರ, ರಾಘವಾಂಕ, ಅವರ ಕೃತಿಗಳಲ್ಲಿಯೂ ಸಹ ಇದು ಜೈನರ ಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ. ೭೭೨ ಜಿನಾಲಯಗಳಿದ್ದವು ಎಂದು ಶಾಸನವು ವರ್ಣಿಸುತ್ತದೆ. ಕನ್ನಡದ ಪ್ರಥಮ ಉಪಲಬ್ಧ ಕೃತಿ ಕವಿರಾಜ ಮಾರ್ಗದಲ್ಲಿ ಕೊಪ್ಪಳವನ್ನು ಮಹಾಕೂಪಣ ನಗರ ಎಂದು ಕರೆದಿರುವ ಉಲ್ಲೇಖವಿದೆ." (ಸೂರ್ಯನಾಥ ಯು. ಕಾಮತ್ ೨೦೦೧, ಕರ್ನಾಟಕದ ಸಾಂಸ್ಕೃತಿಕ ಚರಿತ್ರೆ, ಪುಟ ಸಂಖ್ಯೆ ೧೧೭-೧೧೮)

"ವಿಜಯನಗರದ ಸಾಮ್ರಾಜ್ಯದ ಪತನದ ನಂತರ ಬಿಜಾಪುರದ ಆದಿಲ್‌ಶಾಹಿ ಆಳ್ವಿಕೆಗೆ ಒಳಪಟ್ಟ ಈ ಪ್ರದೇಶವನ್ನು 'ಮುಜಪರ್ ನಗರ' ಎಂದು ಕರೆಯಲಾಗುತ್ತಿತ್ತು. ಮುಂದೆ ಈ ಪ್ರದೇಶವು ಶಿವಾಜಿ ಹೈದರಾಲಿ ಮತ್ತು ಟಿಪ್ಪು ಆಳ್ವಿಕೆಗೆ ಒಳಪಟ್ಟಿತ್ತು. ೧೮೫೭ರಲ್ಲಿ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ಜೂನ್ ೧೮೫೮ರಲ್ಲಿ ಹುತಾತ್ಮರಾದ 'ಮುಂಡರಗಿ ಭೀಮರಾಯ' ಮತ್ತು ಹಮ್ಮಿಗೆ ಕೆಂಚನಗೌಡ ಅವರಿಂದ ಸ್ವಾತಂತ್ರ್ಯ

ಹೋರಾಟದಲ್ಲಿ ಸ್ಥಾನ ಪಡೆದು ಸ್ವಾತಂತ್ರ್ಯ ಹೋರಾಟದ ಕಿಚ್ಚು ಹರಡಿತ್ತು. ಇಂತಹ ವೀರರನ್ನು ಹೊಂದಿದ ಈ ಪ್ರದೇಶವು ೧೯೪೭ ಆಗಸ್ಟ್ ೧೫ರಂದು ದೇಶ ಸ್ವಾತಂತ್ರ್ಯವನ್ನು ಪಡೆದರೂ ಸ್ವತಂತ್ರವನ್ನು ಪಡೆಯದೆ ಹೈದರಾಬಾದಿನ ನಿಜಾಮರ ಆಳ್ವಿಕೆಗೆ ಒಳಗಾಗಿತ್ತು. ಜನರ ಸತತ ಹೋರಾಟದ ಫಲವಾಗಿ ೧೯೪೮ ಸೆಪ್ಟಂಬರ್ ೧೮ರಂದು ಹೈದರಾಬಾದ ಪ್ರದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತ್ತು. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯ ಮೂಲಕ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಗಿ ಇಂದು ಕರ್ನಾಟಕದ ಸ್ವತಂತ್ರ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿದೆ.

ಐತಿಹಾಸಿಕ ಹಿನ್ನೆಲೆ ಹೊಂದಿರುವ ಕೊಪ್ಪಳವು ಕೊಪ್ಪಳ ಜಿಲ್ಲೆಯ ಅನೇಕ ಪ್ರದೇಶಗಳು ವಿಜಯನಗರ ಅರಸರ ಮತ್ತು ಚಾಲುಕ್ಯ ಅರಸರ ಆಳ್ವಿಕೆಗೆ ಒಳಗಾಗಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಅಶೋಕ ಚಕ್ರವರ್ತಿಯ ೪ನೇ ಪ್ರಾಂತವಾಗಿ ಗಂಗಾವತಿ ತಾಲ್ಲೂಕಿನ ಕನಕಗಿರಿ ಗ್ರಾಮವು ಅಂದು 'ಸುವರ್ಣಗಿರಿ'ಯಾಗಿ ಮೆರೆದಿತ್ತು. ಮತ್ತು ವಿಜಯನಗರದ ಅರಸರ ಕಾಲದಲ್ಲಿ ಅವರ ಸಾಮಂತ ದೊರೆ 'ಉಡಚಪ್ಪ ನಾಯಕ'ನ ಆಳ್ವಿಕೆಗೆ ಒಳಗಾಗಿ ವಿಜಯನಗರದ ಹಿರಿಮೆಯನ್ನು ಮೆರೆದಿತ್ತು. ಇಂದಿನ 'ಆನೆಗೊಂದಿ' ಅಂದಿನ ವಿಜಯನಗರ ಅರಸರ ಪ್ರಮುಖ ರಾಜದಾನಿಯಾಗಿ ಕಂಗೊಳಿಸಿತ್ತು. ಯಲಬುರ್ಗಾ ತಾಲ್ಲೂಕಿನ ಇಟಗಿ, ಕುಕನೂರುಗಳು ಚಾಲುಕ್ಯ ಅರಸರ ಸಾಂಸ್ಕೃತಿಕ ತಾಣಗಳಾಗಿ ಬೆಳೆದಿದ್ದವು. ಕೊಪ್ಪಳದಿಂದ ೧೩ ಕಿ.ಮೀ. ದೂರದಲ್ಲಿರುವ ಕಿನ್ನಾಳ ಗ್ರಾಮ ಪ್ರಾಚೀನ ಕಾಲದಿಂದಲು ಇಂದಿನವರೆಗೂ ಗೊಂಬೆ ತಯಾರಿಕೆಗೆ ಪ್ರಸಿದ್ಧಿಯನ್ನು ಪಡೆದಿದೆ. ಹೀಗೆ ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದ ಕೊಪ್ಪಳ ಜಿಲ್ಲೆಯು ಇಂದು ವಾಣಿಜ್ಯ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯುತ್ತದೆ." (www.koppal nic.in. koppal district prafil).

## ೨.೩. ಜನಸಂಖ್ಯೆ

ಕೊಪ್ಪಳ ಜಿಲ್ಲೆಯು ಜನಸಂಖ್ಯೆಯಲ್ಲಿ ರಾಜ್ಯದಲ್ಲಿ ೨೪ನೇ ಸ್ಥಾನವನ್ನು ಪಡೆದರೆ ಜನಸಂಖ್ಯೆ ದೃಷ್ಟಿಯಿಂದ ರಾಜ್ಯದಲ್ಲಿ ನಾಲ್ಕನೆಯ ಚಿಕ್ಕ ಪುಟ್ಟ ಜಿಲ್ಲೆಯಾಗಿರುವುದು ತಿಳಿದುಬರುತ್ತದೆ. ರಾಜ್ಯದಲ್ಲಿ ಬೆಳಗಾವಿ, ಕಲಬುರ್ಗಿ ಮತ್ತು ತುಮಕೂರು ಜನಸಂಖ್ಯೆ ದೃಷ್ಟಿಯಿಂದ ಅತಿ ದೊಡ್ಡ ಜಿಲ್ಲೆಗಳಾಗಿವೆ. ೨೦೦೯ ಡಿಸೆಂಬರ್ ೩ರಂದು ಕಲಬುರ್ಗಿ ಜಿಲ್ಲೆಯನ್ನು ವಿಭಜಿಸಿ ಯಾದಗಿರಿ ತಾಲ್ಲೂಕನ್ನು ರಾಜ್ಯದ ೩೦ನೇ ಜಿಲ್ಲೆಯಾಗಿ ರಚಿಸಲಾಯಿತು. ಇದರಿಂದ ರಾಜ್ಯದಲ್ಲಿ ಬೆಂಗಳೂರು ಜಿಲ್ಲೆಯ ನಂತರ ಬೆಳಗಾವಿ ಮತ್ತು ತುಮಕೂರು ಜಿಲ್ಲೆಗಳು ದೊಡ್ಡ ಜಿಲ್ಲೆಗಳಾಗಿರುವುದು ಕಂಡುಬರುತ್ತದೆ.

೨೦೧೧ರ ಜನಗಣತಿಯ ಪ್ರಕಾರ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೧೧.೯೬ ಲಕ್ಷ ಜನಸಂಖ್ಯೆ ಇದ್ದು ಇದರಲ್ಲಿ ೬.೩ ಲಕ್ಷ ಜನ ಪುರುಷರು ಮತ್ತು ೫.೯೨ ಲಕ್ಷ ಜನ ಮಹಿಳೆಯರು ಕಂಡುಬರುತ್ತಾರೆ.

೨೦೧೧ರ ಜನಗಣತಿಯ ಪ್ರಕಾರ ಕೊಪ್ಪಳ ಜಿಲ್ಲೆಯ ಪ್ರತಿ ತಾಲ್ಲೂಕುಗಳ ಪುರುಷರು ಮತ್ತು ಮಹಿಳೆಯರ ಜನಸಂಖ್ಯೆ ಒಟ್ಟು ಜನಸಂಖ್ಯೆಯ ಮಾಹಿತಿಯನ್ನು ಈ ಮೇಲಿನ ಕೋಷ್ಠಕದಲ್ಲಿ ಕಾಣಲಾಗಿದೆ.

**ಕರ್ನಾಟಕದ ಬುಡ್ಗಜಂಗಮರ ೨೦೧೧ರ ಜನಸಂಖ್ಯೆ**

೨೦೧೧ರ ಜನಗಣತಿ ಪ್ರಕಾರ ಬುಡ್ಗ ಜಂಗಮ್ ಸಮುದಾಯವು ಕರ್ನಾಟಕದಲ್ಲಿ ಒಟ್ಟು ೧,೧೭,೧೬೪ ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ಪುರುಷರು ೫೯,೩೭೨ ಜನಸಂಖ್ಯೆ ಇದ್ದು, ಮಹಿಳೆಯರ ೫೭,೭೯೨ ಜನಸಂಖ್ಯೆ ಇರುವುದು.

**ಕೊಪ್ಪಳ ಜಿಲ್ಲೆಯಲ್ಲಿ ಬುಡ್ಗ ಜಂಗಮರ ಜನಸಂಖ್ಯೆ**

೨೦೧೧ರ ಜನಗಣತಿಯ ಪ್ರಕಾರ ಕೊಪ್ಪಳ ಜಿಲ್ಲೆಯಲ್ಲಿ ಬುಡ್ಗ ಜಂಗಮ್ ಸಮುದಾಯದ ಜನಸಂಖ್ಯೆಯು ಈ ಕೆಳಗಿನಂತಿದೆ.

| ಗಂಡು | ಹೆಣ್ಣು | ಒಟ್ಟು |
|---|---|---|
| ೬೮೯೬ | ೬೬೩೦ | ೧೭,೫೨೬ |

ಈ ಮೇಲಿನ ಕೋಷ್ಠಕದಲ್ಲಿ ಬುಡ್ಗಜಂಗಮ್ ಸಮುದಾಯದ ಗಂಡು ಮತ್ತು ಹೆಣ್ಣು ಮಕ್ಕಳ ಜನಸಂಖ್ಯೆ ಮತ್ತು ಒಟ್ಟು ಜನಸಂಖ್ಯೆಯ ಮಾಹಿತಿಯನ್ನು ತಿಳಿಯಲಾಗಿದೆ. ಕೊಪ್ಪಳ ಜಿಲ್ಲೆಯಲ್ಲಿ ಬುಡ್ಗ ಜಂಗಮ ಸಮುದಾಯವು ಕಂಡುಬರುವ ಸ್ಥಳಗಳು ಎಂದರೆ ಗಂಗಾವತಿ, ಸಿದ್ದಾಪುರ, ಭಾಗ್ಯನಗರ, ಕುದರಿಮೋತಿ, ಹಿರೇವಂಕಲಕುಂಟೆ, ಕುಷ್ಟಗಿ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿದೆ.

**ಅಡಿಟಿಪ್ಪಣಿಗಳು**


೧. ಶಿರೂರ ಬಿ.ವಿ., ೨೦೦೬, ಕೊಪ್ಪಳ ಜಿಲ್ಲಾ ದರ್ಶನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨. ಸೂರ್ಯನಾಥ ಯು. ಕಾಮತ್, ೨೦೦೧, ಕರ್ನಾಟಕದ ಸಾಂಸ್ಕೃತಿಕ ಚರಿತ್ರೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೩. www.koppal nic.in march 2008 ಅಂತರಜಾಲ ಮಾಹಿತಿ

೪. www. koppal nic.in ಅಂತರಜಾಲ ಮಾಹಿತಿ

೫. www. koppal nic.in. koppal district profil




# ಅಧ್ಯಾಯ : ಮೂರು

## ಬುಡ್ಗ ಜಂಗಮ ಸಮುದಾಯದ ಹಿನ್ನೆಲೆ

೩.೧. ಬುಡ್ಗ ಜಂಗಮ ಸಮುದಾಯದ ಪದನಿಷ್ಪತ್ತಿ
೩.೨. ಪೌರಾಣಿಕ ಹಿನ್ನೆಲೆ
೩.೩. ಸಾಮಾಜಿಕ ಸ್ಥಿತಿಗತಿ
೩.೩.೧. ಜೀವನ ವರ್ತಮಾನ ಆಚರಣೆಗಳು
೩.೩.೨. ವರ್ಷವರ್ತಮಾನ ಆಚರಣೆಗಳು

# ಅಧ್ಯಾಯ: ಮೂರು

# ಬುಡ್ಗ ಜಂಗಮ ಸಮುದಾಯದ ಹಿನ್ನೆಲೆ

## ೩.೧. ಬುಡ್ಗ ಜಂಗಮ್ ಸಮುದಾಯದ ಪದನಿಷ್ಪತ್ತಿ

"ಬುಡ್ಗ ಜಂಗಮ್ ಸಮುದಾಯದ ಪದನಿಷ್ಪತ್ತಿ ಕುರಿತು ಹಲವಾರು ತಜ್ಞರ ಭಿನ್ನಾಭಿಪ್ರಾಯಗಳು ಬೆಳಕಿಗೆ ಬಂದಿವೆ.

**ಪ್ರೊ.ಬಿ. ರಾಮರಾಜು** ಅವರು ತಮ್ಮ 'ತೆಲುಗು ಜಾನಪದ ಗೇಯ ಸಾಹಿತ್ಯಂ' ಎಂಬ ಕೃತಿಯಲ್ಲಿ ಬುಡಿಗೆ ಎಂಬ ವಾದ್ಯವನ್ನು ನುಡಿಸುತ್ತಾ ಕಥೆ ಹೇಳುವ ಜನರನ್ನು ಬುಡ್ಗ ಜಂಗಾಲು ಎಂದು ಕರೆದಿದ್ದಾರೆ.

**ಮರುವೂರು ಕೋದಂಡರಾಮರೆಡ್ಡಿ** ಅವರು ಬರೆದ 'ಮಾಂಡಲಿಕ ಪದಕೋಶಂ' ಎಂಬ ಗ್ರಂಥದಲ್ಲಿ ಇವರನ್ನು ವಿವರಿಸುತ್ತಾ 'ತಂದಾನಾ' ಕಥೆಗಳನ್ನು ಹೇಳಿ ಜೀವಿಸುವ ಬುರ್ರ ಕಥೆಯವರು ಹಾಗೂ 'ಬುಡಗೇಲು' ವಾದ್ಯವನ್ನು ನುಡಿಸುತ್ತಾ ಭಿಕ್ಷೆ ಎತ್ತುವವರೇ 'ಬುಡ್ಗ ಜಂಗಾಲ' ಜಾತಿಯವರು ಎಂದು ತಿಳಿಸಿರುತ್ತಾರೆ.

**ಯಳನಾಡು ಅಂಜಿನಪ್ಪನವರು** 'ಹಗಲು ವೇಷದವರ ಸಂಸ್ಕೃತಿ' ಎಂಬ ತಮ್ಮ ಪುಸ್ತಕದಲ್ಲಿ ಹಗಲು ವೇಷ ಹಾಕುವ ಜನರನ್ನು ಬುಡ್ಗ ಜಂಗಾಲು ಎಂದು ಕರೆಯುತ್ತಾರೆ.

**ಎಡ್ಗರ್ ಥರ್ಸಟನ್** ಹಗಲು ವೇಷದವರನ್ನು ಕುರಿತು ಹೀಗೆ ಬರೆಯುತ್ತಾರೆ. ತಿರುಪತಿ ಗಂಗಮ್ಮ ಎನ್ನುವ ದೇವತೆಯ ಗೌರವಾರ್ಥ ನಡೆಯುವ ವಾರ್ಷಿಕ ಜಾತ್ರೆಯಲ್ಲಿ ಪ್ರತಿದಿನ ಬೆಳಗ್ಗೆ ಸಂಜೆ ಬೈರಾಗಿ, ಸರ್ಪ ಮುಂತಾದ ಬೇರೆ ಬೇರೆ ವೇಷ ಧರಿಸಿ ಭಿಕ್ಷೆ ಎತ್ತುವ ತೆಲುಗು ಭಿಕ್ಷುಕ ವರ್ಗವನ್ನು ಹಗಲು ವೇಷದವರು ಎಂದು ಇವರು ದಾಖಲಿಸಿದ್ದಾರೆ. ತೆಲುಗು ದೇಶದಲ್ಲಿ ಬೇಟೆಯಾಡಿ ಜೀವಿಸುವ ಜನರನ್ನು 'ಬೋಯ' ಎಂದು ಕರ್ನಾಟಕದಲ್ಲಿ ಬೇಡ ಎಂದು ಕರೆಯಲಾಗುತ್ತದೆ. ಥರ್ಸಟನ್ ಅವರನ್ನು ಬೇಡರನ್ನು ಬೇಡ ಜಂಗಾಲು ಎಂದು ಕರೆಯುವುದರಲ್ಲಿ ಅರ್ಥವಿದೆ.

ಬುಡ್ಗ ಜಂಗಾಲು ಜನ ನಾನಾ ವೇಷಗಳನ್ನು ಹಾಕುವುದರಿಂದ ಇವರನ್ನು ಬಹುರೂಪಿಗಳು ಎಂದು ಗುರುತಿಸಿರುವುದು ಕಂಡುಬರುತ್ತದೆ. ವಚನಕಾರರಲ್ಲೊಬ್ಬರಾದ 'ಅಂಬಿಗರ ಚೌಡಯ್ಯ'ನು ಬಹುರೂಪಿ ಸಮುದಾಯಕ್ಕೆ ಸೇರಿದವನೆಂದು ತಿಳಿದುಬರುತ್ತದೆ. ಬೆಸ್ತರು ಬೇಟೆಯಾಡುವುದರಿಂದ ಒಂದು ಅರ್ಥದಲ್ಲಿ ಇವರನ್ನು ಬೇಡ ಜಂಗಾಲು ಎಂದು ಕರೆದಿರಲೂಬಹುದು ಎಂದು ಯಳನಾಡು ಅಂಜಿನಪ್ಪನವರ ತರ್ಕ.

ಬುಡ್ಗ ಜಂಗಮ ಬುಡ್ಗ ಜಂಗಾಲು ಸಮುದಾಯವನ್ನು ಕುರಿತು ವಿಷಯಗಳು ಕನ್ನಡ ಸಾಹಿತ್ಯದಲ್ಲಿ ಸುಲಭವಾಗಿ ಲಭ್ಯವಾಗುತ್ತಿಲ್ಲ. ಆದರೆ ಈ ಜನಾಂಗ ನಾನಾ ವೇಷಗಳನ್ನು ಹಾಕುವವರೂ ಆಗಿರುವುದರಿಂದ 'ಬಹುರೂಪಿಗಳು' ಎನ್ನುವ ಉಲ್ಲೇಖಗಳು ಅಲ್ಲಲ್ಲಿ ಸಿಗುತ್ತವೆ. ವಚನ ಸಾಹಿತ್ಯದಲ್ಲಿ ಇವರ ಬಗ್ಗೆ ಉಲ್ಲೇಖವಿರುವುದನ್ನು ಗುರುತಿಸಬಹುದು. ಬಿಬ್ಬಿ ಬಾಚಯ್ಯನ ವಚನವೊಂದನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಅವರು ಬೇರೆ ಬೇರೆ ವೇಷ ತೊಡುವವರನ್ನು ಬಹುರೂಪಿಗಳು ಎಂದು ಕರೆದಿದ್ದಾರೆ.

ಈ ಎಲ್ಲಾ ಅಂಶಗಳಿಂದ 'ಬುಡ್ಗ ಜಂಗಾಲು' ಜನಾಂಗದ ಅಸ್ತಿತ್ವ ಹನ್ನೆರಡನೆಯ ಶತಮಾನಕ್ಕೂ ಹಿಂದಕ್ಕೆ ಹೋಗುತ್ತದೆ. ಈ ಸಮುದಾಯದ ಪ್ರತಿನಿಧಿಕ ಕಾವ್ಯವಾದ ಗಂಗಮ್ಮ–ಗೌರಮ್ಮ ಕಥನ ಕಾವ್ಯ ಬುಡ್ಗ ಜಂಗಾಲು ಸಮುದಾಯದ ಒಂದು ಸಾಂಪ್ರದಾಯಿಕ ಕಾವ್ಯವಾಗಿದೆ

ಈ ಮೇಲಿನ ಎಲ್ಲಾ ತಜ್ಞರ ಅಭಿಪ್ರಾಯಗಳನ್ನು ಅಲ್ಲಗಳೆಯುವಂತಿಲ್ಲ, ಅವರು ಬುಡ್ಗ ಜಂಗಮ್ ಪದನಿಷ್ಪತ್ತಿ ಹಾಗೂ ಅದಕ್ಕೆ ತಮ್ಮದೇ ಆದ ಅರ್ಥ ನೀಡಿರುತ್ತಾರೆ.

### ೩.೨. ಪೌರಾಣಿಕ ಹಿನ್ನೆಲೆ

"ಬೃಂಗಿಯು ಪರಮೇಶ್ವರ–ಪಾರ್ವತಿ ಕುಳಿತಿರಬೇಕಾದರೆ ಅವರ ಮುಂದೆ ಪ್ರತಿದಿನ ಒಂದೊಂದು ವೇಷ ಧರಿಸಿ ನೃತ್ಯ ಮಾಡಿ ತೋರಿಸುವುದು, ಈತನ ಜೊತೆ ನಂದೀಶ್ವರನೂ ಸಹ ಇರುತ್ತಾನೆ. ಹೀಗೆ ಬೃಂಗಿ ದಿನಾಲು ಒಂದೊಂದು ಪ್ರವೇಶ ಮಾಡಿ ತೋರಿಸುತ್ತಿರಬೇಕಾದರೆ ಒಂದು ದಿನ ಬೇಸತ್ತು ಭೂಲೋಕಕ್ಕೆ ಬಂದು ವೇಷಗಾರರಿಗೆ ಬ್ರಹ್ಮಕಪಾಲ ಕೊಟ್ಟು (ಜೋಳಿಗೆ) ನಿಮಗೆ ಯಾರೇ ಏನು ಹೇಳಿದರೂ ನಿಮ್ಮ ವೃತ್ತಿಯನ್ನು ಬಿಡಬೇಡಿ, ಮುಂಜಾನೆ ಎದ್ದಾಗಿನಿಂದ ರಾತ್ರಿ ಮಲಗುವವರಿಗೆ ನನ್ನ ನಾಮದ ಜಾತಿಯಲ್ಲಿ, ವಿವಿಧ ವೇಷಗಳನ್ನು ಹಾಕುತ್ತಾ ಭಿಕ್ಷೆ ಬೇಡುತ್ತಾ ಕಾಲ ಕಳೆಯಿರಿ ಎಂದು ಹೇಳಿದನಂತೆ. ಇವರು ಹೇಳಿದ ಕಥೆಗೆ ಯಾವುದೇ ಸಾಕ್ಷ್ಯಾಧಾರಗಳಿಲ್ಲ. ಇದು ಕೇವಲ ಬಾಯಿಂದ ಬಾಯಿಗೆ ಬಂದಂತಹ ಕಥೆ ಇದನ್ನು ನಾವು ಯಾವುದೇ ರೀತಿ ಪ್ರಶ್ನೆ ಮಾಡುವಹಾಗಿಲ್ಲ.

### ೧. ದಂತಕಥೆ

ಪ್ರತಿ ಕುಲ, ಜಾತಿಗಳು ಹುಟ್ಟುವುದಕ್ಕೆ ಒಂದೊಂದು ದಂತಕಥೆಗಳು ಇವೆ. ಅದನ್ನೇ ಕುಲ ಪುರಾಣ ಎನ್ನುತ್ತಾರೆ. ಬುಡ್ಗ ಜಂಗಮರ ಕುಲವನ್ನು ಕುರಿತು ಇಂತಹ ಒಂದು ಕಥೆ ಇದೆ. ಇದು ಹೆಚ್ಚು ಆಂಧ್ರಪ್ರದೇಶದಲ್ಲಿ ಪ್ರಚಾರದಲ್ಲಿದೆ.

ಈ ಕುಲದ ನಾಲ್ವರು ಮೂಲ ಪುರುಷರು ಅಡವಿಯಲ್ಲಿ ಇಲಿಗಳನ್ನು ಹಿಡಿಯಲು ಬಿಲಗಳನ್ನು ಅಗೆಯುತ್ತಿರುತ್ತಾರೆ. ಈ ಸಮಯದಲ್ಲಿ ಭೂಲೋಕ ವಿಹಾರಕ್ಕಾಗಿ ಬಂದ ಪಾರ್ವತಿ ಪರಮೇಶ್ವರರು ಬಂದಿರುತ್ತಾರೆ. ಇವರನ್ನು ನೋಡುತ್ತಾರೆ. ಇವರ ಬದುಕಿನ ಹೀನವಾದ, ಧೀನವಾದ ಮಕ್ಕಳ ಆಟವಂತಿರುವ ಇವರ ಸ್ಥಿತಿಯನ್ನು ನೋಡಿ ನಕ್ಕು ಪಾರ್ವತಿ ದೇವಿ ಇವರಿಗೆ ಸುಖವಾದ ಜೀವನ ನೀಡೋಣವೆಂದು ಪರಿಪರಿಯಾಗಿ ಗಂಡನನ್ನು ಬೇಡಿಕೊಳ್ಳುತ್ತಾಳೆ. ಇವರ ದುಷ್ಟ ಬುದ್ಧಿ, ಅವಿವೇಕ ಎಂದಿಗೂ ಸರಿ ಹೋಗುವುದಿಲ್ಲವೆಂದು ಪರಮೇಶ್ವರ ಹೇಳುತ್ತಾನೆ. ಇದನ್ನು ಕೇಳದೆ ನೀವು ಮನಸ್ಸು ಮಾಡಿದರೆ ಅದೇನು ದೊಡ್ಡ ಕೆಲಸವಲ್ಲವೆಂದು ಪಟ್ಟು ಹಿಡಿಯುತ್ತಾಳೆ. ಮೊದಲು ಇವರನ್ನು ಪರೀಕ್ಷಿಸಿ ನೋಡೋಣ ನಿನಗೆ ತಿಳಿಯುತ್ತದೆ ಎಂದು ಪರಮೇಶ್ವರನು ವೃದ್ಧ ವೇಷದಲ್ಲಿ, ಪಾರ್ವತಿ ಯೌವ್ವನದ ಹುಡುಗಿಯ ವೇಷದಲ್ಲಿ ಅವರಿಗೆ ಹಿತ ಹೇಳಲು ಹೋಗುತ್ತಾರೆ. ಪಾರ್ವತಿ ಪರಮೇಶ್ವರರ ಮಾತು ಕೇಳದೆ ವೃದ್ಧನ ವೇಷದಲ್ಲಿದ್ದ ಪರಮೇಶ್ವರನನ್ನು ಹಿಗ್ಗಾಮುಗ್ಗಾ ಎಳೆದಾಡಿ ಪಕ್ಕಕ್ಕೆ ದೂಕಿ, ಹುಡುಗಿ ರೂಪದಲ್ಲಿದ್ದ ಪಾರ್ವತಿಯ ಮೇಲೆ ಕಾಮಾಂದರಾಗಿ ಹೋಗುತ್ತಾರೆ. ಆಗ ಪಾರ್ವತಿದೇವಿ ಶಪಿಸಿ, ನಿಮ್ಮ ಸುಖ ಶಾಂತಿಯೆಲ್ಲ ಸುಟ್ಟು ಹೋಗಿ, ಸ್ಥಿರ ನಿವಾಸವಿಲ್ಲದೆ ಊರೂರು ತಿರುಗುತ್ತ ಹೀನವಾದ, ದೀನವಾದ ಬದುಕನ್ನು ನಡೆಸಿರಿ ಎಂದು ಶಪಿಸಿ ಪಾರ್ವತಿ, ಪರಮೇಶ್ವರ ಮಾಯವಾಗುತ್ತಾರೆ. ಅದಕ್ಕಾಗಿ ಈ ಕುಲಸ್ಥರು ಅಡವಿಯಲ್ಲಿ ಅನಾಗರಿಕವಾಗಿ, ಸಂಚಾರ ಜೀವಿಗಳಾಗಿ ಕಾಲ ಕಳೆಯುತ್ತಿದ್ದೇವೆ ಎಂದು ಹೇಳುತ್ತಾರೆ.

### ಐತಿಹಾಸಿಕ ಹಿನ್ನೆಲೆ

ಯಾವುದೇ ಬುಡಕಟ್ಟು ಸಮುದಾಯವನ್ನು ಅಧ್ಯಯನ ಮಾಡಿದರೂ, ಅವರ ಈಗಿನ ಜೀವನ ವಿಧಾನದಿಂದಲೇ ಆ ಬುಡಕಟ್ಟಿನಲ್ಲಿ ಆಗಿರಬಹುದಾದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಅನಿವಾರ್ಯವಾಗಿ ನಾವು ಬುಡಕಟ್ಟು ಸಮುದಯದ ಮಾಹಿತಿಗಾಗಿ ತಡಕಾಡುತ್ತಾ, ಆ ಕುರಿತು ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಪರಿಶೀಲಿಸುವುದರ ಜೊತೆಗೆ ಐತಿಹಾಸಿಕ ಮತ್ತು ಪೌರಾಣಿಕ ಐತಿಹ್ಯಗಳೇನಾದರೂ ದೊರೆತಲ್ಲಿ ಅವುಗಳನ್ನು ಕೂಡ ಅನುಲಕ್ಷಿಸಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳುವ ಅಗತ್ಯವಿದೆ.

ಈ ಜನಾಂಗವು ವೇಷಗಾರಿಕೆಯನ್ನು ಯಾವ ಉದ್ದೇಶಕ್ಕಾಗಿ, ಯಾವ ಕಾಲದಲ್ಲಿ ತೊಟ್ಟಿತು? ಎಂಬ ಪ್ರಶ್ನೆಗಳಿಗೆ ನಮ್ಮಲ್ಲಿ ಸ್ಪಷ್ಟ ಉತ್ತರಗಳಿಲ್ಲ ಇವರ ಜೀವನಕ್ರಮ ಇಂದಿಗೂ

ಅಲೆಮಾರಿ ರೂಪದಲ್ಲಿರುವುದರಿಂದ ಇವರ ಮೂಲ ಎಲ್ಲೋ ಮರೆಮಾಚಿದಂತೆ ತೋರುತ್ತದೆ. ಈ ಸಮುದಾಯಕ್ಕೂ ಸಹ ಒಂದು ಪ್ರಾಚೀನ ಇತಿಹಾಸ ಇರಲೇಬೇಕು.

ಆಂಧ್ರದ ಕೆಲವು ವೇಷಗಾರರನ್ನು ಕೇಳಿದರೆ ಒಂಬತ್ತನೆ ಶತಮಾನದ ತರುವಾಯ ಒಂದು ಪ್ರತಾಪರುದ್ರನ ಕಾಲಕ್ಕೆ, ಧರ್ಮ ಪ್ರಚಾರಕ್ಕೋಸ್ಕರ ಹಲವಾರು ಚಾಂಡಾಲ, ಜಾತಿಗೆ ಸೇರಿದ ಸಮುದಾಯವನ್ನು ಕೂಡಿಸಿ ಒಬ್ಬೊಬ್ಬರಿಗೆ ಒಂದೊಂದು ಸಂಗೀತ ವಾದ್ಯವನ್ನು ನೀಡಿ ಧರ್ಮ ಪ್ರಚಾರಕ್ಕೆ ಕಳುಹಿಸಿದನೆಂದು, ಅದರಲ್ಲಿ ವೇಷಗಾರರಾದ ನಾವು ಒಬ್ಬರೆಂದು ಹೇಳುತ್ತಾರೆ.

ಮೂಲ ತಿಳಿಯದ ಕೆಲವು ವೇಷಗಾರರು ಶಿವಾಜಿಯ ಕಾಲದಲ್ಲಿ ತಮ್ಮ ವೇಷಗಾರಿಕೆ ಪ್ರಾರಂಭವಾಯಿತೆಂದು ಹೇಳುತ್ತಾರೆ. ಬಹುಶಃ ಶಿವಾಜಿಯು ಗುಪ್ತ ವೇಷ ಮೊದಲಾದ ರೋಚಕ ಘಟನೆಗಳಿಗೆ ಹೆಸರಾಗಿರುವುದನ್ನು ಗಮನಿಸಿಯೇ ಈ ವೇಷಗಾರ ಕಲಾವಿದರನ್ನು ಶಿವಾಜಿಯು ರಾಜಕೀಯ ಗುಪ್ತ ಚಲನ ವಲನಗಳಿಗೆ ಬಳಸುತ್ತಿದ್ದುದರಿಂದಲೇ ಈ ಕಲಾವಿದರು ತಮ್ಮ ಪ್ರಾಚೀನತೆಯನ್ನು ಇಲ್ಲಿಂದಲೇ ಎಂದು ತಪ್ಪಾಗಿ ಹೇಳುತ್ತಿರಬೇಕು. ಇನ್ನು ಕೆಲವು ವೇಷಗಾರರು ತಮ್ಮದು ಕ್ಷತ್ರಿಯ ವಂಶವೆಂದು ಹೇಳುತ್ತಾರೆ. ನಮ್ಮ ದೇಶದಲ್ಲಿ ಪೂರ್ಣವಾಗಿ ಹುಟ್ಟಿ ಕುಲವಾಗಿ ಬೆಳೆದಿದ್ದ ಕ್ಷತ್ರಿಯ ಸಮುದಾಯ ಒಂದು ಕಾಲಕ್ಕೆ ಯಾವುದೋ ಕಾರಣದಿಂದ ಮಾಯವಾಗಿ ಇದು ವೇಷಗಾರರು, ರಾಮಕೊಂಡರು, ಸುಡುಗಾಡಸಿದ್ದರು ಒಂದೇ ಮೂಲದವರಾಗಿದ್ದು ವೃತ್ತಿ ಕಾರಣವಾಗಿ ಭಿನ್ನ ಎನಿಸಿದ್ದಾರೆ. ಇವರಲ್ಲಿ ಪರಸ್ಪರ ರಕ್ತಸಂಬಂಧವೇರ್ಪಟ್ಟಿರುವುದು ಈ ಅಂಶವನ್ನು ಬೆಂಬಲಿಸುತ್ತದೆ." (ಬಳ್ಳಾರಿ ಮತ್ತು ಆಂಧ್ರ ಗಡಿಭಾಗದ ಹಗಲುವೇಷಗಾರರು ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ೨೦೦೨)

**೩.೩. ಸಾಮಾಜಿಕ ಸ್ಥಿತಿಗತಿ**

"ಒಂದು ಸಮುದಾಯದ ಜೀವನಶೈಲಿ ಆ ಸಮುದಾಯದ ಸಂಸ್ಕೃತಿ ಮತ್ತು ಪರಂಪರಾಗತವಾಗಿ ಆಧರಿಸಿ ರೂಪುಗೊಂಡಿರುವ ಮೌಲ್ಯಗಳನ್ನು ಸಮಾಜ ಎಂದು ಕರೆಯುತ್ತಾರೆ. ಸಮಾಜ ಮಾನವ ಜೀವನದ ಒಂದು ಅಂಗ. ಅದನ್ನು ನಿರಾಕರಿಸಿ ಬಾಳುವೆ ನಡೆಸಲು ಯಾವೊಬ್ಬ ವ್ಯಕ್ತಿಗೂ ಸಾಧ್ಯವಿಲ್ಲ. ನಿರಾಕರಿಸಿ ನಡೆದರೆ ಒಂದು ಜೀವಿಗೆ ಮೂಗು ಬಾಯಿ ಮುಚ್ಚಿದರೆ ಯಾವ ಅನುಭವವಾಗುತ್ತದೆಯೋ ಅಂತಹ ಅನುಭವವಾಗುತ್ತದೆ. ವ್ಯಕ್ತಿಯ ವ್ಯವಹಾರಿಕ ಜೀವನ ಸಮಾಜದಲ್ಲಿಯೇ ಬೇರು ಬಿಟ್ಟಿರುತ್ತವೆ. ಅದಕ್ಕಾಗಿಯೇ ವ್ಯಕ್ತಿ ಬಿಟ್ಟು ಸಮಾಜ, ಸಮಾಜ ಬಿಟ್ಟು ವ್ಯಕ್ತಿ ನಿರಾಕರಿಸಿ ನಡೆಯುವುದು ಸಾಧ್ಯವಿಲ್ಲ. ಈ ಕಾರಣಕ್ಕಾಗಿಯೇ ಮಾನವನು ಸಮಾಜ ಜೀವಿ ಎನ್ನುವರು.

ಬುಡ್ಗ ಜಂಗಮರು ಸಹ ಇದರಿಂದ ಹೊರತಾಗಿಲ್ಲ. ತಮ್ಮದೇಯಾದ ಜೀವನ ವಿಧಾನ, ಸಾಮಾಜಿಕ ವ್ಯವಸ್ಥೆ ಮತ್ತು ಸರಳ ಸಮಾಜದ ಲಕ್ಷಣಗಳ ಪರಿಧಿಯಲ್ಲಿಯೇ ಬಾಳುತ್ತಿದ್ದಾರೆ. ಹಲವಾರು ಸಮುದಾಯಗಳು ಸಮಾಜವನ್ನು ದುಡಿಸಿಕೊಂಡು ಮುಂದೆ ಬರಲು ಆದರೆ

ಅವರಿಗೆ ಅದು ಸಾಧ್ಯವಾಗಿಲ್ಲ. ಏಕೆಂದರೆ ಅಂದಿನಿಂದ ಇಂದಿನವರೆಗೆ ಜನರ ಪ್ರೀತಿ, ಪ್ರೇರಣೆ, ವಿಶ್ವಾಸವನ್ನು ನಂಬಿ ಅದರಲ್ಲಿಯೇ ತೃಪ್ತಿ ಪಟ್ಟು ಸಮಾಜದ ಅಂಗವಾದ ಸರಕಾರದ ಯೋಜನೆಗಳೆಡೆಗೆ ಕಣ್ಣೆತ್ತಿ ಸಹ ನೋಡಲಿಲ್ಲ. ಸ್ಥಿರವಾಗಿ ನೆಲೆ ಇಲ್ಲದಿದ್ದರೂ ಅದರ ಚಿಂತೆ ಮಾಡಲಿಲ್ಲ. ತಾವು ವಿದ್ಯಾಭ್ಯಾಸದಿಂದ ವಂಚಿತರಾಗಿ ಮಕ್ಕಳನ್ನು ಸಹ ಅದೇ ಮಾರ್ಗದಲ್ಲಿ ನಡೆಸಿದರು. ಇದು ಅಂತಹ ಕೊರತೆಗಳನ್ನು ನೋಡಿ ಬಾಧೆ ಪಡುತ್ತಿದ್ದಾರೆ. ಕನಿಷ್ಟ ಸೌಲಭ್ಯಗಳ ಕಡೆಗೂ ಸಹ ನಿರ್ಲಕ್ಷ್ಯ ಹೊಂದಿ ಇಂದು ಜೀವನದ ನೆಲೆಯೇ ಕಷ್ಟವಾಗಿದೆ. ಈ ಸಂಗತಿಗಳನ್ನು ಪರಿಗಣಿಸಿ ಪ್ರಸ್ತುತ ಅಧ್ಯಯನದಲ್ಲಿ ಈ ಸಮುದಾಯದ ಸಾಮಾಜಿಕ ಸ್ಥಿತಿಗತಿಯನ್ನು ಕುರಿತು ಚರ್ಚಿಸಲಾಗಿದೆ.

ಕರ್ನಾಟಕದ ಕೆಲವು ವೀರಶೈವ ಜಂಗಮರು ಸರಕಾರಿ ಸೌಲಭ್ಯಗಳನ್ನು ಪಡೆಯಲು, ತಾವು ಪರಿಶಿಷ್ಟ ಜಾತಿಯವರೆಂದು ಪ್ರಮಾಣಪತ್ರ ಪಡೆದುದು ಬೆಳಕಿಗೆ ಬಂದಾಗ ಬುಡ್ಗ ಜಂಗಮರ ಕುರಿತು ಮಾತುಗಳು ಕೇಳಿ ಬರತೊಡಗಿದವು.

ಒಂದೊಂದು ಪ್ರದೇಶದಲ್ಲಿ ಇವರು ಬೇರೆ ಬೇರೆ ಹೆಸರುಗಳಿಂದಿರುವುದಾಗಲಿ, ಬೇರೆ ಬೇರೆ ವೃತ್ತಿಗಳನ್ನು ಅನುಸರಿಸಿ ಬಾಳಿಕೊಂಡಿರುವುದಾಗಲಿ, ಇತರ ದ್ರಾವಿಡ ಜನ ಕುಲಗಳ ಕತೆಯನ್ನೇ ಹೇಳುತ್ತದೆ. ಹಗಲುವೇಷದವರು, ಬುರ್ರಕತೆಯವರು, ಬಾಳಸಂತರು, ಬಹುರೂಪಿಗಳು ಬೈರಾಗಿ ಎಂಬ ಹೆಸರುಗಳಲ್ಲಿ ಬುಡ್ಗ ಜಂಗಮರಿದ್ದಾರೆಂದು ಈ ಜನಕುಲಗಳ ಸಂಘಟನೆ, ಹೋರಾಟದ ಮುಂಚೂಣಿಯಲ್ಲಿರುವ ಡಾ.ಕೆ.ಎಂ. ಮೇತ್ರಿಯವರು ಸಂಭಾವಿಸಿದ್ದಾರೆ.

ಥರಸ್ಟನ್ ಮೊದಲಾದ ಮಾಹಿತಿ ಸಂಗ್ರಹಕರ ಓದಿನಿಂದ ಹುಟ್ಟುವ ಕೆಲವು ಅನಿಸಿಕೆಗಳನ್ನು ಮಾತ್ರ ಇಲ್ಲಿ ಹಂಚಿಕೊಳ್ಳಲು ಇಚ್ಛೆ ಪಡುತ್ತೇನೆ. ಬುಡ್ಗ ಜಂಗಮರ ಕುರಿತ ಮಾಹಿತಿ ಗ್ರಂಥಗಳ, ಲೇಖನಗಳ ಈ ಲಭ್ಯತೆಯ ಹೊತ್ತಿನಲ್ಲಿ ಇದು ಅನಿವಾರ್ಯ.

ಕರ್ನಾಟಕದ ವೀರಶೈವ ಜಂಗಮರು ಇಂದು ಪ್ರತಿಷ್ಠಿತ ಸ್ಥಾನ ಮಾನದಲ್ಲಿದ್ದಾರೆ. ಇವರಲ್ಲಿ ಕಡು ಬಡವರ ಕತೆ ಬೇರೆಯೆ ಇದೆ ನಿಜ. ಆದರೆ ಚರ್ಚೆಯ ಸಂದರ್ಭದಲ್ಲಿ ಒಟ್ಟು ವೀರಶೈವ ಜಂಗಮರನ್ನು ಮೇಲ್ಜಾತಿ ಎಂದೇ ಗುರುತಿಸಲಾಗುತ್ತದೆ. ಇದಕ್ಕೆ ೧೨ನೇ ಶತಮಾನದ ಶರಣ ಚಳುವಳಿಯಿಂದೀಚೆನ ಸಾಮಾಜಿಕ ಸ್ವರೂಪ ಬಹುಮಟ್ಟಿಗೆ ಕಾರಣ. ಆದರೆ ಚಳುವಳಿಯ ಹಿಂದೆಯೂ ಕಾಳಾಮುಖ ಶೈವ ಪಂಥಗಳು ಪ್ರಬಲವಾಗಿಯೆ ಇದ್ದವು. ಶಾಸನಾದಿ ಸಾಹಿತ್ಯವನ್ನು ಅವಲೋಕಿಸದರೆ ಇದು ನಿಚ್ಚಳ.

ಕನ್ನಡ ನಾಡಿನ ಉಳಿಗಮಾನ್ಯ ಕಾಲದುದ್ದಕ್ಕೂ ಇವರ ಶಿಷ್ಟ ಧರ್ಮಗಳ ಮತ್ತು ಸಂಸ್ಥೆಗಳ ಜತೆ ಪೈಪೋಟಿಗಿಳಿದು, ಪ್ರಾಬಲ್ಯ ಉಳಿಸಿಕೊಂಡು, ಕಾಲದ ಪ್ರಭಾವಗಳಲ್ಲಿ ಪರಿಷ್ಕಾರಗೊಂಡು ಬಂದಿರುವ ಜಂಗಮರಲ್ಲಿ ವೀರಶೈವ ಜಂಗಮರೇ ಬಲಯುತರಾದರು.

ಇದರ ಕತೆ ಬೇರೇನೋ ಇದೆ. ಪ್ರಭುತ್ವದ ಜತೆ ಹೊಂದಿಕೊಂಡು ಬಂದ ಆ ಜನವರ್ಗ ಶೋಷಕರಾಗುಳಿಯಲು ಸಾಧ್ಯವಾಯಿತು.

ರಜಾಕರ ಹಾವಳಿಯಿದ್ದ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸುತ್ತುತ್ತಿರಬೇಕಾದರೆ, ಕೆಲವು ವೀರಶೈವ ಸಂಸ್ಥಾನ ಮಠಗಳ ಅಸ್ತ್ರ–ವಸ್ತ್ರ, ಆಸ್ತಿ–ಪಾಸ್ತಿ ಇತ್ಯಾದಿಗಳನ್ನು ಕಂಡು ಅಚ್ಚರಿಯಾಯಿತು. ರಜಾಕರ ವಿರುದ್ಧ ಹೋರಾಡಿ ಹಿಂಸೆ ಅನುಭವಿಸಿದ ಜನಸಮುದಾಯಗಳಲ್ಲಿ ವೀರಶೈವರೂ ಸಾಕಷ್ಟಿದ್ದರೆಂಬುದು ನಿಜ. ಆದರೆ ಈ ಸಂಸ್ಥಾನ ಮಠಗಳು ಅಬಾಧಿತವಾಗುಳಿಯಲು ಕಾರಣ ನಿಜಾಮ ಆಡಳಿತದ ಜತೆಗಿದ್ದ ಅವರ ಸಂಬಂಧದ ಸ್ವರೂಪವೇ ಅಲ್ಲವೇ? ಸೂಫಿಗಳ ಮತ್ತು ಕೆಲವು ವೀರಶೈವ ಅನುಬಾವಿಗಲ ಸಂಬಂಧಗಳು ಸಾಂಸ್ಕೃತಿಕ ಕೊಳುಕೊಡೆಗಳು ಬೇರೊಂದು ದಿಕ್ಕಿನಲ್ಲಿ ಯೋಚಿಸಲು ಪ್ರೇರೇಪಿಸುತ್ತವೆ.

ಅದಲ್ಲ ಇಲ್ಲಿಯ ಪ್ರಶ್ನೆ. ಚರಿತ್ರೆಯುದ್ದಕ್ಕೂ ದ್ರಾವಿಡ ಸಾಂಸ್ಕೃತಿಕ ನಾಡಿನಾದ್ಯಂತ ನಿರ್ಣಾಯಕ ಪಾತ್ರ ನಿರ್ವಹಿಸುತ್ತ ಬಂದ ಜನಪದ ಗುರುವರ್ಗದಲ್ಲಿ ಈ ಕುರಿತ ನನ್ನ ಪುಸ್ತಕ (ಗುಲಬರ್ಗಾ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಿತ)ಯನ್ನು ನೋಡಬಹುದು. "ಕನ್ನಡ ಜನಪದ ಗುರು ಪರಂಪರೆ" ಇಲ್ಲಿ ಬರುವ ಬುಡ್ಗ ಜಂಗಮರ ಕುರಿತ ಕುತೂಹಲ.

ದ್ರಾವಿಡ ಕುಲಗಳ ಆದಿಮ ಘಟ್ಟದಲ್ಲಿ ಅಂದರೆ ಬುಡಕಟ್ಟು ಜೀವನಕ್ರಮದಲ್ಲಿ ಹುಟ್ಟಿದ ಈ 'ಗುರು' ಪರಂಪರೆ ಜನಪದದ ಚರಿತ್ರೆಯುದ್ದಕ್ಕೂ ಒಂದಿಲ್ಲೊಂದು ಬಗೆಯಲ್ಲಿ ಉಳಿದು ಬಂದಿರುವುದು ಇಂದು ನಮಗೆ ಅಧ್ಯಯನದ ಆಕರವಾಗಿದೆ. ಬುಡ್ಗ ಜಂಗಮರು ವಿಶಾಲವಾದ ದ್ರಾವಿಡ ಜನಪದ ಗುರುವರ್ಗದಲ್ಲಿ ಸೇರುವವರು. ಇವರು ತಮ್ಮನ್ನು ಹೋಲುವ ಇತರೆರಲ್ಲ ಜಂಗಮರಿಗಿಂತ ಹೆಚ್ಚು ಆದಿಮವೆಂಬಂಥ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದ್ದಾರೆ, ಮತ್ತು ಇತರೆರೆಲ್ಲ ಜಂಗಮರ ಮೂಲದ ಕುರಿತ ಅಧ್ಯಯನಕ್ಕೆ ಆಕರವೆಂಬಂತೆ ಇದ್ದಾರೆ.

ಈವರೆಗೆ ನಡೆದಿರುವ ಇವರ ಕುರಿತ ಅಲ್ಪಸ್ವಲ್ಪ ಅಧ್ಯಯನದಿಂದ ಊಹಿಸಬಹುದಾದರೆ ವೀರಶೈವ ಜಂಗಮರ ಮೂಲ ಬುಡ್ಗ ಜಂಗಾಲಕ್ಕೆ ಹೋಗಿ ನಿಲ್ಲುತ್ತಿರುವುದು. ಇದರಿಂದ ವೀರಶೈವ ಜಂಗಮರು ಖುಷಿಪಡಬೇಕಿಲ್ಲ; ಎಸ್.ಸಿ. ಪ್ರಮಾಣ ಪತ್ರ ಸಿಕ್ಕೀತೆಂದು ಜೊಲ್ಲು ಸುರಿಸಬೇಕಿಲ್ಲ. ಏಕೆಂದರೆ ವ್ಯವಸ್ಥೆ ಒದಗಿಸಿದ ಸೌಲಭ್ಯಗಳ ಲಾಭವನ್ನು ಕರ್ನಾಟಕದ ವೀರಶೈವ ಜಂಗಮರು ಚರಿತ್ರೆಯುದ್ಧಕ್ಕೂ ಪಡೆದುಕೊಂಡು ಬಂದಿದ್ದಾರೆ. ಇದನ್ನು ಬುಡ್ಗ ಜಂಗಮರು ಪಡೆಯಲೇ ಇಲ್ಲ. ಇತರ ಸಹಯೋಗಿ ಗುರುವರ್ಗದವರಂತೆ ಇವರು ಭಿಕ್ಷುಕ ಸ್ಥಿತಿಯಲ್ಲೇ ಉಳಿದರು. ೧೨ನೇ ಶತಮಾನದ ಕಾಯಕ ಜೀವಿಗಳ ಚುವಳಿ ಸಂದರ್ಭ ಶಿವನನ್ನು ಗುರುಲಿಂಗ ಜಂಗಮವೆಂಬ ತ್ರಿಮೂರ್ತಿ ರೂಪದಲ್ಲಿ ಕಲ್ಪಿಸಿತಷ್ಟೇ. ಚಳುವಳಿಯ ಹಿಂದಿದ್ದ ವಿವಿಧ ಬಗೆಯ ಜಂಗಮರು ಈ ಸಂದರ್ಭದಲ್ಲಿ ವೀರಶೈವ ಜಂಗಮರಾಗಿ ಮಾರ್ಪಟ್ಟು, ಕಾಲಾಂತರದಲ್ಲಿ

ವ್ಯವಸ್ಥೆಯಿಂದ ದಾನ-ದತ್ತುಗಳ ಮೂಲಕ ಶೋಷಕವರ್ಗವಾದರು. ತಮ್ಮ ಆದಿಯ ಆಚರಣೆಗಳನ್ನು ವೀರಶೈವೀಕರಿಸಿಕೊಂಡರೂ ಕೆಲವು ಅವಶೇಷದಂತೆ ಉಳಿದವು.

ದ್ರಾವಿಡ ಜನಪದ ಗುರುವರ್ಗದ ಎಲ್ಲ ಗುಣ ಲಕ್ಷಣಗಳು ಬುಡ್ಗ ಜಂಗಮರಲ್ಲಿವೆ. ಅವು ಜಾತಿ ವರ್ಗ, ವರ್ಗಗಳು ಹುಟ್ಟುವ ಮೊದಲಿದ್ದ ಸಾಮಾಜಿಕ ಸ್ಥಿತಿಗತಿಗೆ ಅನುಗುಣವಾಗಿರುವುದರಿಂದ ಕೆಲವು ಆರೋಗ್ಯಕರ ಸ್ವರೂಪವಾಗಿ ಕಾಣುತ್ತವೆ. ಸಾಮಾಜಿಕ ಆಂದೋಲನದ ಸ್ಫೂರ್ತಿ ಕೇಂದ್ರವಾಗಿಯೂ ಸೇರುತ್ತವೆ. ಇದಕ್ಕೆ ಕಾರಣ ಈ ಅಂಶಗಳು ಬುಡಕಟ್ಟು ಸಂಸ್ಕೃತಿ ಮೂಲದವರಾಗಿರುವುದು. ವರ್ಗ, ವರ್ಣ ಜಾತಿ ಸಮಾಜದ ಗಾಢವಾದ ಪ್ರಭಾವದ ನಡುವೆಯೂ ಅದು ಉಳಿದುಬಂದಿರುವ ಆಶ್ಚರ್ಯ ಇದೆ.

ಇಂದು, ಇತರೆಲ್ಲ ಶೋಷಿತ ಜನಕುಲಗಳ ಒಟ್ಟು ಹೋರಾಟದ ಒಂದು ಅಂಶವಾಗಿ ಬುಡ್ಗ ಜಂಗಮರ ಸಂಘಟನೆಯ ಹೋರಾಟ ಬೆಳೆಯಬೇಕಾಗಿದೆ. ಇದರಿಂದ ಮಾತ್ರ ಸಮಾಜವಾದಿ ಸಮಾಜದ ಉದಯವಾದೀತು. ಅಲ್ಲಿ ಇತರ ಶೋಷಿತರಂತೆ ಬುಡ್ಗ ಜಂಗಮರೂ ಗೌರವದಿಂದ ಎಲ್ಲ ಮಾನವರಂತೆ ಬಾಳಲು ಸಾಧ್ಯ." (ಬುಡ್ಗ ಜಂಗಮ ದರ್ಶನಿ, ಸಂಪಾದಕರು, ಕೆ.ಎಂ. ಮೇತ್ರಿ, ಲೇಖನ ಪ್ರೊ.ಎಸ್.ಎಸ್. ಹಿರೇಮಠ, ಪುಟ ಸಂಖ್ಯೆ ೧.೨)

ಕಂಪ್ಲಿ ಅ. ೫ – ತಲೆಯ ಮೇಲೊಂದು ಸೂರು ಇಲ್ಲದೆ ತಾತ್ಕಾಲಿಕ ಕೌದಿ ಟೆಂಟುಗಳಲ್ಲಿ ವಾಸಿಸುತ್ತಿರುವ ಬುಡುಗ ಜಂಗಮ್ ಸಮುದಾಯಕ್ಕೆ ಸೇರಿದ ೨೪ ಕುಟುಂಬಗಳು ಕಳೆದ ಹತ್ತು ವರ್ಷಗಳಿಂದ ಇಲ್ಲಿಯ ಎಂ.ಡಿ. ಕ್ಯಾಂಪ್‌ನಲ್ಲಿ ಕಂಡುಬರುತ್ತವೆ.

ಇವರ ಮುಖ್ಯ ಕಸುಬು ಹಗಲು ವೇಷ ಧರಿಸಿ ಬೀದಿ ಬೀದಿಗಳಲ್ಲಿ ರಾಮಾಯಣ ಮತ್ತು ಮಹಾಭಾರತದ ಸನ್ನಿವೇಶಗಳನ್ನು ಪ್ರದರ್ಶಿಸುವುದು. ಈ ವೃತ್ತಿಯಿಂದ ಬಂದ ಕಾಳುಕಡಿ ಅಲ್ಪಸ್ವಲ್ಪ ಹಣದಿಂದ ಜೀವನ ನಡೆಸುವುದು ಇವರ ದೈನಂದಿನ ಕಾರ್ಯ.

ಇತ್ತೀಚಿಗೆ ಈ ಕುಟುಂಬಗಳ ಸದಸ್ಯರ ಸಂಖ್ಯೆ ಹೆಚ್ಚುತ್ತಾ ಬಂದಿದ್ದು ಹಗಲು ವೇಷದಿಂದ ಹೊಟ್ಟೆ ತುಂಬದೆ ಕ್ರಮೇಣ ಪರ್ಯಾಯ ವೃತ್ತಿಯನ್ನು ಆಯ್ಕೆ ಮಾಡಿಕೊಂಡಿದ್ದಾರೆ.

ಪುರುಷರು ಮತ್ತು ಮಹಿಳೆಯರು ಹಳ್ಳಿಗಳಿಗೆ ಹೋಗಿ ಪ್ಲಾಸ್ಟಿಕ್ ಕೊಡಗಳನ್ನು ಮಾರಾಟ ಮಾಡಿ ಜೀವನ ಮುಂದುವರಿಸಿದ್ದಾರೆ. ಇವರ ಮಕ್ಕಳು ಶಾಲೆಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ.

ಹತ್ತು ವರ್ಷಗಳ ಹಿಂದೆ ಸಂಡೂರು ತಾಲ್ಲೂಕಿನ ತಮ್ಮ ಸ್ವಂತ ಊರಾದ ಹಲೆ ದರೋಜಿಯಿಂದ ಕಂಪ್ಲಿ ಪಟ್ಟಣಕ್ಕೆ ವಲಸೆ ಬಂದು ಎಂ.ಡಿ. ಕ್ಯಾಂಪ್‌ನಲ್ಲಿದ್ದ ೧.೮೨ ಎಕರೆ ಪ್ರದೇಶವನ್ನು ರೂ. ೧.೮೦ ಲಕ್ಷಗಳಿಗೆ ೨೪ ಕುಟುಂಬದ ಹಿರಿಯರೆಲ್ಲರೂ ಸೇರಿ ಖರೀದಿಸಿದ್ದಾಗಿ ಸಮುದಾಯದ ಹಿರಿಯ ದೊಡ್ಡ ಶಂಕರಪ್ಪ ತಿಳಿಸುತ್ತಾರೆ.

ನಮ್ಮದು ಮೊದಲಿನಿಂದಲೂ ಅಲೆಮಾರಿ ಜೀವನ ಶಾಶ್ವತ ನೆಲೆ ಕಂಡುಕೊಳ್ಳಲು ನಿರ್ಧರಿಸಿ ಈ ಸ್ಥಲ ಖರೀದಿಸಿದೆವು. ಆದರೆ ಅಂದಿನಿಂದ ಇಂದಿನವರೆಗೆ ನಮ್ಮ ಕನಸಿನ ಮನೆ ಕಟ್ಟಿಕೊಳ್ಳಲು ಆಗಲಿಲ್ಲವೆಂದು ಅವರೆ ತಿಳಿಸುತ್ತಾರೆ.

ಹತ್ತು ವರ್ಷಗಳಿಂದ ಸೂರು ಕಟ್ಟಿಕೊಳ್ಳಲು ತೀವ್ರ ಪ್ರಯತ್ನ ನಡೆಸಿದ್ದು ಹಣದ ಮುಗ್ಗಟ್ಟು ನಮ್ಮನ್ನು ಎಡಬಿಡದೆ ಕಾಡಿದ್ದು ಅನಿವಾರ್ಯವಾಗಿ ಕೌದಿ ಟೆಂಟುಗಳನ್ನು ಹಾಕಿಕೊಂಡು ವಾಸಿಸಬೇಕಾಗಿದೆ ಎನ್ನುತ್ತಾರೆ. ಕುಡಿಯುವ ನೀರು ಬೇಕೆಂದರೆ ಒಂದು ಕಿ.ಮೀ. ದೂರ ಕ್ರಮಿಸಬೇಕು. ವಿದ್ಯುತ್ ಕನಸಿನ ಮಾತೇ ಸರಿ ಎನ್ನುತ್ತಾರೆ.

ಇವರು ಖರೀದಿಸಿರುವ ನಿವೇಶನಗಳ ಪಕ್ಕದಲ್ಲಿ ಆಶ್ರಯ ಯೋಜನೆಯಡಿ ನೂರಾರು ಮನೆಗಳನ್ನು ನಿರ್ಮಿಸಿದ್ದರೂ ಇವರ ಬಗ್ಗೆ ಯಾರೊಬ್ಬರು ಗಮನ ಹರಿಸಿಲ್ಲ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ಥ ಡಾ.ಕೆ.ಎಂ. ಮೇತ್ರಿ ಅವರು ಒಮ್ಮೆ ತಮ್ಮ ವಸತಿ ಸ್ಥಳಕ್ಕೆ ಭೇಟಿ ನೀಡಿ ನಮ್ಮ ಸಮುದಾಯದವರೊಂದಿಗೆ ಚರ್ಚಿಸಿ ಸರ್ಕಾರದ ಗಮನ ಸೆಳೆಯಲು ಪ್ರಯತ್ನಿಸುವುದಾಗಿ ತಿಳಿಸಿದ್ದಾರೆಂದು ಗಿಡ್ಡಪ್ಪ, ಸುಂಕಮ್ಮ ಮತ್ತು ದುರುಗಮ್ಮ ತಿಳಿಸುತ್ತಾರೆ.

ಹಗಲುವೇಷಧಾರಿಗಳ ಬದುಕು ಮಾತ್ರ ಸದ್ಯ ಕತ್ತಲಲ್ಲೇ ಸಾಗುತ್ತಿರುವುದು ವಾಸ್ತವ ಬದುಕಿಗೆ ಹಿಡಿದ ಕನ್ನಡಿಯಂತಿದೆ. (ಕೃಪೆ: ಪ್ರಜಾವಾಣಿ ೬.೧೦.೨೦೦೪) ಸಮಾಜದಲ್ಲಿ ಬುಡ್ಗ ಜಂಗಮ ಸಮುದಾಯದ ಸಾಮಾಜಿಕ ಸ್ಥಿತಿಗತಿ ಮತ್ತು ಆರ್ಥಿಕ ಸ್ಥಿತಿಗತಿಯು ಬಹಳ ಕೆಳಮಟ್ಟದಲ್ಲಿರುವುದು ಸಹ ಕಂಡುಬರುತ್ತದೆ. ಇವರಿಗೆ ಮೂಲಭೂತ ಸೌಕರ್ಯಗಳು ಕೊರತೆಯಲ್ಲಿ ಇರುವುದು ಮತ್ತು ಉದ್ಯೋಗದ ಕೊರತೆಯಲ್ಲಿರುವುದು ಸಹ ಕಂಡುಬರುತ್ತದೆ. ಮೂಲ ವೃತ್ತಿಯಾದ ಹಗಲುವೇಷಗಾರಿಕೆ ಇದ್ದರು ಸಹ ಈ ವೃತ್ತಿಯಿಂದ ಬಂದ ಆದಾಯ ಅಲ್ಪವಾಗಿದ್ದು, ಇದರಲ್ಲಿ ಜೀವಿಸಲು ಸಾಧ್ಯವಿಲ್ಲ. ಆದರೆ ಇವರು ಮೂಲ ವೃತ್ತಿಯಿಂದ ಪರ್ಯಾಯ ವೃತ್ತಿಗಳೊಡನೆ ವಲಸೆ ಹೋಗುತ್ತಾರೆ. ಇವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯನ್ನು ಗಮನಿಸಿದ್ದರೆ ಸಮಾಜದಲ್ಲಿ ಸ್ಥಿತಿ ಶೋಚನೀಯವಾಗಿದೆ ಎಂದು ಹೇಳಬಹುದು.

ಬುಡ್ಗ ಜಂಗಮರು ಎಂದು ಚಿರಪರಿಚಿತವಾಗಿರುವ ಈ ಹಗಲುವೇಷಗಾರರು ಜನಾಂಗದಲ್ಲಿ ಗುರು ಪರಂಪರೆಯಾಗಲೀ, ಮಠ ಮಾನ್ಯಗಳಾಗಲಿ ಇಲ್ಲ. ಅವರಿಂದ ಈ ಜನಾಂಗದವರಲ್ಲಿ ಒಂದು ಕೇಂದ್ರೀಕೃತವಾದ ಸಾಮಾಜಿಕ ವ್ಯವಸ್ಥೆ ಕಂಡುಬರುವುದಿಲ್ಲ. ಇವರ ಸಾಮಾಜಿಕ ಸ್ಥಿತಿಗತಿ ಬಹಳಷ್ಟು ಹೀನಾಯವಾಗಿದೆ. ಮೂಢನಂಬಿಕೆಗಳು, ಕಟ್ಟುಪಾಡುಗಳು, ಆಚರಣೆಗಳೇ ಇವರ ಜೀವಾಳವಾಗಿವೆ. ಇವರ ಸಾಮಾಜಿಕ ವ್ಯವಸ್ಥೆಯಲ್ಲಿ ಹೊರಗಿನ ಪ್ರವೇಶದ ಜನರ ಪ್ರವೇಶ ನಿಷಿದ್ಧವಾಗಿದೆ.

'ಯಡವಲ್ಲಿ' ಮತ್ತು 'ಸಿರಿಸ್ಯಾಲ' ವಂಶದವರು ಇಲ್ಲಿನ ಜನಾಂಗದವರಲ್ಲಿ ಕೆಲವು ಸಂದರ್ಭಗಳಲ್ಲಿ ಮುಖ್ಯರಾಗುತ್ತಾರೆ. ಇವರು ಆ ಜನಾಂಗದಲ್ಲಿ ಒಂದು ರೀತಿಯ ಪುರೋಹಿತರಿದ್ದಂತೆ. ಜಾತಿ ಪದ್ಧತಿ ಇಲ್ಲಿ ಹೇರಳವಾಗಿದೆ. ಅಂತರ್ಜಾಲ ವಿವಾಹಕ್ಕೆ ಆಸ್ಪದವಿಲ್ಲ. ತಪ್ಪಿಸ್ಥರಿಂದ ದಂಡವನ್ನು ಹಣದ ರೂಪದಲ್ಲಿ ಸಂಗ್ರಹಿಸಲಾಗುತ್ತದೆ. ಇಂತಹ ಹಣವನ್ನು ಕುಲದೈವದ ಬೇಟೆ ಎಂದು ಕರೆಯುವ ಹಬ್ಬದಲ್ಲಿ ಮಾಂಸದ ಊಟಕ್ಕೆ ಬಳಸುತ್ತಾರೆ. ಸಮಾಜದ ಹಣವನ್ನು ಯಾರೊಬ್ಬರೂ ಸ್ವಂತಕ್ಕೆ ಬಳಸುವುದಿಲ್ಲ. ಅವರ ಸಾಮಾಜಿಕ ವ್ಯವಸ್ಥೆ ಒಕ್ಕೂಟ ವ್ಯವಸ್ಥೆಯಾಗಿದ್ದರೂ ನ್ಯೂನ್ಯತೆಗಳಿಂದ ಹೊರತಾಗಿಲ್ಲ.

ಸಾಮಾನ್ಯವಾಗಿ ಬುಡಕಟ್ಟು ಜನಾಂಗದ ಸಮಾಜಗಳು ಹೊರ ಜಗತ್ತಿನ ಸಾಮಾಜಿಕ ಚೌಕಟ್ಟಿನಿಂದ ದೂರವಾಗಿರುತ್ತವೆ. ಮತ್ತು ಭಿನ್ನವಾಗಿರುತ್ತವೆ. ಇದಕ್ಕೆ ಹಗಲುವೇಷಗಾರರ ಸಾಮಾಜಿಕ ವ್ಯವಸ್ಥೆಯು ಹೊರತಾಗಿಲ್ಲ. ಬುಡಗ ಜಂಗಮರ ಸಾಮಾಜಿಕ ವ್ಯವಸ್ಥೆಯು ಅನೇಕ ಕಟ್ಟುಪಾಡುಗಳಿಂದ ಕೂಡಿದೆ. ಇವರ ಸಮುದಾಯದಲ್ಲಿ ಶಿಸ್ತಿಗೆ ಹೆಚ್ಚಿನ ಆದ್ಯತೆ ನೀಡಲಾಗಿದೆ.

ಇಂದಿನ ಜಾಗತೀಕರಣದ ಕಾಲದಲ್ಲಿಯೂ ಈ ಬುಡಕಟ್ಟು ಜನಾಂಗದವರು ಹಿಂದಿನ ರೀತಿಯಲ್ಲಿಯೇ ಬದುಕುತ್ತಿದ್ದಾರೆ. ಅವರನ್ನು ಅಕ್ಷರಸ್ಥರನ್ನಾಗಿ ಮಾಡಿ, ಅವರ ಸೀಮಿತ ಚೌಕಟ್ಟಿನಿಂದ ಹೊರಗೆ ತರುವ ಕೆಲಸವನ್ನು ಮಾಡಬೇಕಾಗಿದೆ.

ಈ ಸಮುದಾಯದ ಜನರು ಸಾಮಾಜಿಕ ಒಳಾಡಳಿತ ಪದ್ಧತಿಯನ್ನು ಹೊಂದಿರುತ್ತಾರೆ. ತಮ್ಮ ಸಮಾಜದ ಸಮಸ್ಯೆಗಳನ್ನು ತಮ್ಮಲ್ಲಿಯೇ ಬಗೆಹರಿಸಿಕೊಳ್ಳುತ್ತಾರೆ. ಸಮಾಜದ ಕಟ್ಟುಪಾಡುಗಳನ್ನು ಪಾಲಿಸಿಕೊಂಡು ಹೋಗುವುದು ಎಲ್ಲರ ಮುಖ್ಯ ಗುರಿಯಾಗಿರುತ್ತದೆ.

ಇವರ ನ್ಯಾಯ ಪದ್ಧತಿಯಲ್ಲಿ ತಪ್ಪು ದಂಡದ, ದೈಹಿಕ ಶಿಕ್ಷೆಯ ಮೂಲಕ ತಪ್ಪಿತಸ್ಥನಿಗೆ ಶಿಕ್ಷೆ ವಿಧಿಸಲಾಗುತ್ತದೆ. ಸಮುದಾಯದ ನೀತಿ ನಿಯಮಗಳನ್ನು ಪಾಲಿಸದವರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಾಗುತ್ತದೆ. ಮುಖಂಡ ಅಥವಾ ನಾಯಕನೇ ಪಂಚಾಯಿತಿಯ ಮುಖ್ಯಸ್ಥನಾಗಿರುತ್ತಾನೆ. ಪ್ರತಿಯೊಬ್ಬರಿಗೂ ನ್ಯಾಯವನ್ನು ದೊರಕಿಸಿಕೊಡುವುದು ಪಂಚಾಯಿತಿ ವ್ಯವಸ್ಥೆಯ ಮುಖ್ಯ ಕರ್ತವ್ಯವಾಗಿರುತ್ತದೆ. ಇದನ್ನು ಎಲ್ಲಾ ಮುಖಂಡರು ಅಚ್ಚುಕಟ್ಟಾಗಿ ನೆರವೇರಿಸುತ್ತಾರೆ.

ಅಲೆಮಾರಿಗಳಾದ ಹಗಲುವೇಷಗಾರರು ಎರಡು ವರ್ಷಕ್ಕೊಮ್ಮೆ ಮಾತ್ರ ತಾವು ದೇಶದ ಯಾವುದೇ ಮೂಲೆಯಲ್ಲಿದ್ದರೂ ತಪ್ಪದೇ ಮೊಹರಂ ಹಬ್ಬದ ಸಮಯದಲ್ಲಿ ಕುದರಿಮೋತಿ ಗ್ರಾಮಕ್ಕೆ ಬರುತ್ತಾರೆ. ಅಲ್ಲಿ ಎಲ್ಲರೂ ಒಂದುಗೂಡುತ್ತಾರೆ. ನಂತರ ಮತ್ತೆ ಅಲೆಮಾರಿ ಬದುಕಿಗೆ ಮರುಳುತ್ತಾರೆ.

ಇವರಿಗೆ ಸರಿಯಾದ ನೆಲೆಯಿಲ್ಲ, ಸರಕಾರದ ಸಹಾಯವಿಲ್ಲ. ಮತದಾರರ ಪಟ್ಟಿಯಲ್ಲಿ ಹೆಸರನ್ನು ಇವರು ಹೊಂದಿದ್ದರೂ ಮತದಾನದ ಸಮಯದಲ್ಲಿ ಮಾತ್ರ ಇವರನ್ನು ವಾಹನದಲ್ಲಿ

ಕರೆದುಕೊಂಡು ಹೋಗಿ ಐವತ್ತೋ–ನೂರೋ ರೂಪಾಯಿಗಳನ್ನು ನೀಡಿ ಮತ್ತೆ ಮಾತನಾಡಿಸುವುದೇ ಇಲ್ಲ. ಇವರ ಬದುಕಿಗೆ, ಕಲೆಗೆ, ಬಣ್ಣಕ್ಕೆ ಪ್ರೋತ್ಸಾಹ ಮತ್ತು ನೆರವಿನ ಅಗತ್ಯತೆ ಇದೆ. (ಮಾಹಿತಿದಾರರು ಅಶೋಕ ಗಟ್ಟಪನವರು ಕುದರಿಮೋತಿ ಗ್ರಾಮ)

ಇವರ ಸಾಮಾಜಿಕ ಸ್ಥಿತಿಗತಿಯನ್ನು ಗಮನಿಸಿದ್ದರೆ ಇವರು ಅಲೆಮಾರಿಗಳಾಗಿದ್ದು ಸರಕಾರದ ಯಾವುದೇ ಸೌಲಭ್ಯಗಳು ಸಹ ಇವರಿಗೆ ಸರಿಯಾದ ಪ್ರಮಾಣದಲ್ಲಿ ದೊರೆಯುವುದಿಲ್ಲ. ಈ ಸಮುದಾಯದಲ್ಲಿ ಶಿಕ್ಷತರ ಪ್ರಮಾಣ ಕಡಿಮೇ ಇವರು ತಾವು ಬದುಕಲು ತಮ್ಮ ಮೂಲ ವೃತ್ತಿಯಾದ ಹಗಲುವೇಷಗಾರಿಕೆಯನ್ನು ಮೈಗೂಡಿಸಿಕೊಂಡು ಅಲೆಮಾರಿಯಾಗಿ ಜೀವನ ನಡೆಸುವುದರ ಜೊತೆಗೆ ಇತರೆ ವೃತ್ತಿಗಳಾದ ಚಾಪೆ ಎಣಿಯುವುದು, ಬೇಟೆ ಆಡುವುದು, ಭಿಕ್ಷೆ ಬೇಡುವುದು, ಕೌದಿ ಹೊಲಿಯುವುದು ಇವುಗಳನ್ನು ಮಾಡುವುದರ ಮೂಲಕ ತಮ್ಮ ಜೀವನವನ್ನು ನಡೆಸುತ್ತಾರೆ. ಇವರ ಸಾಮಾಜಿಕ ಸ್ಥಿತಿಗತಿಯು ಬಹಳ ಚಿಂತಾಜನಕವಾಗಿದೆ.

**೩.೩.೧. ಜೀವನ ವರ್ತಮಾನ ಆಚರಣೆಗಳು**

"ವರ್ಣಾಶ್ರಮದ ವ್ಯವಸ್ಥೆಯಿದ್ದ ನಮ್ಮ ಸಮಾಜದಲ್ಲಿ ವರ್ಣಕ್ಕೆ ಅನುಸಾರವಾಗಿ ಸಂಪ್ರದಾಯ, ಆಚರಣೆ, ಉದ್ಯೋಗಕ್ಕೆ ಅನುಸಾರವಾಗಿ ಸಮುದಾಯ, ಜಾತಿಗಳು ನಿರ್ಮಾಣಗೊಂಡಿರುವುದು ಐತಿಹಾಸಿಕ ಸತ್ಯ. ಕಾಲಾಂತರದಲ್ಲಿ ಸಂಪ್ರದಾಯ, ಆಚರಣೆ, ಉದ್ಯೋಗಗಳಿಗನುಸಾರವಾಗಿ ಅವು ಜಾತಿಗಳನ್ನು ನಿರ್ದೇಶಿಸುತ್ತ ಉಚ್ಚ–ನೀಚ ಕಲ್ಪನೆಯ ಸಂಕೇತವಾಗಿ ಉಳಿದುಕೊಂಡು ಬಂದಿವೆ. ಅಂದಿನ ಮೌಲ್ಯದಿಂದಾಗಿ ಇಂದು ಹಲವಾರು ಸಮುದಾಯಗಳು ಇಂದಿನ ಸಮಾಜದ ನಿಯಮಗಳ ವಿರುದ್ಧ ಈಸಲೇಬೇಕಾದ ಪರಿಸ್ಥಿತಿ ಬಂದೊದಗಿದೆ.

ಒಂದು ಸಮುದಾಯದಲ್ಲಿ ಜನಿಸಿದ ವ್ಯಕ್ತಿ ಸಾಯುವವರೆಗೂ ಅವರಲ್ಲಿ ರೂಢಿಯಲ್ಲಿರುವ ಸಂಪ್ರದಾಯಗಳನ್ನು ನಿರಾಕರಿಸಿ ಜೀವಿಸುವುದು ಕಷ್ಟಸಾಧ್ಯ. ಮಾನವ ಸಂಘಜೀವಿ ಸಂಘದ ನಿಯಮಕ್ಕೆ ಬದ್ಧನಾಗಿರಬೇಕಾಗುತ್ತದೆ. ಕಾಲಕ್ಕೆ ಅನುಗುಣವಾಗಿ ಸಮಾಜದಲ್ಲಿಯ ಆಚರಣೆಗಳು ಬದಲಾಗುತ್ತಲೇ ಇರುತ್ತವೆ. ಆದರೆ ಬುಡಕಟ್ಟು ಸಮುದಾಯಗಳಲ್ಲಿ ಅಷ್ಟು ಸುಲಭವಾಗಿ ಬದಲಾಗುವುದಿಲ್ಲ. ಶಿಷ್ಟ ಸಮಾಜದಲ್ಲಿ ತಕ್ಷಣ ಬದಲಾದರೆ ಬುಡಕಟ್ಟು ಸಮುದಾಯಗಳಲ್ಲಿ ನಿಧಾನ ಗತಿಯಲ್ಲಿ ಬದಲಾಗುವುದು. ಆಚರಣೆಗಳನ್ನು ಕುರಿತಂತೆ ಪ್ರತಿಯೊಂದು ಧರ್ಮವೂ ತನ್ನದೇ ಆದ ಕಲ್ಪನೆಯನ್ನು ಹೊಂದಿದೆ. ಇದಕ್ಕೆ ಬುಡ್ಗಜಂಗಮರು ಹೊರತಲ್ಲ.

**ಹೆರಿಗೆ**

ಈ ಸಮುದಾಯದಲ್ಲಿ ಮಂತ್ರಸಾನಿ ಎಂಬ ಹೆರಿಗೆ ಕಾರ್ಯದಲ್ಲಿ ಅನಭವಸ್ಥಳಾದವಳು ಇರುತ್ತಾಳೆ. ಹೆರಿಗೆಯ ಒಂದು ತಿಂಗಳ ಮುಂಚೆಯಿಂದ ಮಂತ್ರಸಾನಿ ಇರುವಲ್ಲಿಗೆ ಹೋಗ ಅವರ ಹತ್ತಿರ ಬಿಡಾರ ಹೂಡುತ್ತಾರೆ. ಮಂತ್ರಸಾನಿ ಕುಟುಂಬ ಮತ್ತೊಂದು ಊರಿಗೆ ಬದಲಾದರೆ ಅವರ ಹಿಂದೆ ಈ ಗರ್ಭಿಣಿ ಕುಟುಂಬ ಕೂಡ ಬದಲಾಗುತ್ತಾರೆ. ಹೆರಿಗೆ ನೋವು ಪ್ರಾರಂಭವಾದಾಗ

ಮಂತ್ರಸಾನಿಯು ಹಿತ್ತಾಳೆಯ ಚಂಬಿನಲ್ಲಾಗಲಿ, ರಾಗಿಯ ಚಂಬಿನಲ್ಲಾಗಲಿ ಮಂತ್ರಿಸಿದ ನೀರು ತಂದು ಗರ್ಭಿಣಿಗೆ ಕುಡಿಯಿಸುತ್ತಾಳೆ. ಮಾನಸಿಕವಾಗಿ ಧೈರ್ಯ ತುಂಬುತ್ತಾ ಹೆರಿಗೆಗೆ ಉತ್ತೇಜಿಸುತ್ತಿರುತ್ತಾಳೆ. ಗರ್ಭಿಣಿಗೆ ನೋವು ಬಂದು ಪ್ರಸವ ಸಂಭವಿಸಿದಾಗ ಕುಲದ ಸ್ತ್ರೀಯರು ಬಿಡಾರದ ಸುತ್ತಲೂ ನಿಂತು ಶಿವುಡೊಚ್ಚ ಶಿವುಡೊಚ್ಚ... (ಶಿವಬಂದ ಶಿವಬಂದ...) ದೇವುಡೊಚ್ಚ ದೇವುಡೊಚ್ಚ.... (ದೇವರು ಬಂದ ದೇವರು ಬಂದ...) ಸ್ವಾಮಿವಚ್ಚ ಸ್ವಾಮಿವಚ್ಚ... (ಸ್ವಾಮಿ ಬಂದ ಸ್ವಾಮಿ ಬಂದ...) ಎನ್ನುತ್ತ ಪ್ರಸವ ಸಂಭವಿಸುವವರೆಗೆ ನಿನಾದ ಮಾಡುತ್ತಿರುತ್ತಾರೆ.

ಹೆರಿಗೆಯಾದ ತಕ್ಷಣ ತೊಳೆದ ಈಳಿಗೆಯಿಂದ ಹೊಕ್ಕಳ ಹುರಿ ಕೊಯ್ಯುತ್ತಾರೆ. ಇಲ್ಲಿಯ ಇಕ್ಕೆಲಗಳನ್ನು ಪುಡಿಗೊಲಿಸಿ ಅದರಲ್ಲಿ ಅರಿಷಿಣ ಕೊಬ್ಬರಿ ಎಣ್ಣೆ ಮಿಶ್ರಗೊಳಿಸಿ ಹೊಕ್ಕಳು ಹುರಿ ಕೊಯ್ದ ಭಾಗಕ್ಕೆ ಹಚ್ಚುತ್ತಾರೆ. ಹೀಗೆ ಹಚ್ಚುವುದರಿಂದ ತಾಯಿಯ ವಿಸರ್ಜಿತ ವಸ್ತು ಹೊರಬರುತ್ತದೆ ಎಂದು ಹೇಳುತ್ತಾರೆ. ಹೆರಿಗೆಯಾದ ನಂತರ ಬರುವ ಮಾಸವನ್ನು ಇವರು ಕೊಲ್ಲು ಎನ್ನುತ್ತಾರೆ. ಅದನ್ನು ಒಂದು ಹೊಸ ಗಡಿಗೆಯಲ್ಲಿ ತುಂಬಿ ಬಿಡಾರದ ಎದುರು ಹೂಳಿಡುತ್ತಾರೆ. ಹೆರಿಗೆಯಾದ ಮೇಲೆ ಬಾಣಂತಿ ಮತ್ತು ಮಗು ಇರುವ ಬಿಡಾರದಲ್ಲಿ ಭೂತ ಪ್ರೇತಗಳು ಸುಲಿಯಬಾರದೆಂದು ಬಾರಿಗೆ, ಮೀನಿನ ಬಲೆ ಇಟ್ಟು ಬಿಡಾರದ ಸುತ್ತ ಬೂದಿ ಮಂತ್ರಿಸಿ ಹಾಕುತ್ತಾರೆ. ಇದನ್ನು ಪೊತ್ತಿಕಟ್ಟಡಂ ಎಂದು ಕರೆಯುತ್ತಾರೆ.

ಹೆರಿಗೆಯಾದ ಮೇಲೆ ಸುತ್ತಮುತ್ತಲಿನ ಬಿಡಾರದವರು ಒಂದೊಂದು ಹಂಡೆ ನೀರು ಕಾಯಿಸಿಕೊಂಡು ಬರುತ್ತಾರೆ. ಮಾಯ ಅಥವಾ ಕೊಲ್ಲು ಹೂಳಿರುವ ಜಾಗದಲ್ಲಿ ಒಂದು ಕಲ್ಲನ್ನು ಹಾಕಿ ಅದರ ಮೇಲೆ ಬಾಣಂತಿಯನ್ನು ಕೂಡಿಸಿ ಅರೆದ ಬೇವಿನ ತಪ್ಪಲು ಮತ್ತು ಅರಿಷಿಣ ಪುಡಿ ಮೈಗೆ ಲೇಪಿಸಿ ಸ್ನಾನ ಮಾಡಿಸುತ್ತಾರೆ. ಸ್ನಾನ ಆದ ಮೇಲೆ ಸೂರ್ಯನಿಗೆ ನಮಸ್ಕಾರ ಮಾಡಿ ಒಳ ಪ್ರವೇಶಿಸುವಳು.

**ಪುರುಡು ಅಥವಾ ನಾಮಕರಣ**

ಮಗುವು ಜನಿಸಿದ ಮೂರನೆ ದಿನವನ್ನು ಈ ದಿನವನ್ನಾಗಿ ಆಚರಿಸುತ್ತಾರೆ. ಗಂಡು ಮಗು ಜನಿಸಿದ್ದರೆ ಅಂದು ಬೇಟೆಯಾಡಲೇಬೇಕೆಂಬ ನಿಯಮವಿದೆ. ಅದೇ ದಿನ ಸಮುದಾಯದ ಆಚಾರದ ಪ್ರಕಾರ ಗಂಡು ಮಗುವಾದರೆ ಐವತ್ತು ರೂಪಾಯಿ ಹೆಣ್ಣು ಮಗುವಾದರೆ ಇಪ್ಪತ್ತೈದು ರೂಪಾಯಿ ಕುಲಕ್ಕೆ ಇನಾಮು (ಕುಲಚಾಜ) ಕೊಡಬೇಕು. ಬಾಣಂತಿಗೆ ಊಟಕೊಟ್ಟು ಕಂಠಪೂರ್ತಿ ಸರಾಯಿ ಕುಡಿಸುತ್ತಾರೆ. ಬೇಟೆಗೆ ಹೋದವರಿಗೆ ನೀರು ಕಾಯಿಸಿ ಹಾಕಿ ಸ್ನಾನ ಮಾಡಿಸುತ್ತಾರೆ. ಕುಲಜರೆಲ್ಲರಿಗೂ ಊಟ ಹಾಕಿಸುತ್ತಾರೆ. ನೆರೆದ ಜನರೆಲ್ಲರೂ ನಿಮ್ಮ ಮಗುವಿಗೆ ಏನೆಂದು ಹೆಸರಿಟ್ಟಿದ್ದೀರಿ ಎಂದು ಕೇಳುತ್ತಾರೆ. ಇಂತಹ ಹೆಸರನ್ನು ನಿಶ್ಚಯಿಸಿದ್ದೇವೆ ಎಂದು ಮಗುವಿನ ತಂದೆ ಹೇಳುತ್ತಾನೆ. ಇದೇ ಇವರಲ್ಲಿ ನಾಮಕರಣವಿದ್ದಂತೆ.

**ಕಲ್ಲು (ಕಳ್ಳು) ಪೂಜೆ:** ಹೆರಿಗೆಯಾದ ಮಗು ಆರೋಗ್ಯವಾದರೆ ದೊರೆ ಕಲ್ಲು ಎಂದು. ಮಗು ಆರೋಗ್ಯವಾಗಿ ಇಲ್ಲದಿದ್ದರೆ ದೊಂಗ ಕಲ್ಲು ಎಂದು ಎರಡು ರೀತಿಯಲ್ಲಿ ಹೂಳುತ್ತಾರೆ. ದೊರೆ ಕಲ್ಲನ್ನು ಬಿಡಾರದ ಸಮೀಪ ದೊಂಗ ಕಲ್ಲುವನ್ನು ಬಿಡಾರಕ್ಕೆ ಸ್ವಲ್ಪ ದೂರ ಹೂಳುತ್ತಾರೆ. ಹಾಗೆ ಹೂಳಿದ ಜಾಗದಲ್ಲಿ ಒಂದು ಕಲ್ಲು ನೆಟ್ಟು ಆ ಜಾಗವನ್ನು ಪೂಜಿಸುತ್ತಾರೆ. ಅದನ್ನು ಕಲ್ಲುಪೂಜೆ ಅಥವಾ ಕಳ್ಳುಪೂಜೆ ಎಂದು ಕರೆಯುತ್ತಾರೆ. ಅಂತಹ ಕಲ್ಲಿನ ಮುಂದೆ ಮೂರು ಬಿಂಗುಸಿ ಕಲ್ಲುಗಳನ್ನು ಇಟ್ಟು, ಅವುಗಳನ್ನು ತೊಳೆದು ವಿಭೂತಿ ಕುಂಕುಮ ಹಚ್ಚಿ ಬೆಳ್ಳುಳ್ಳಿಯ ಹಾರವನ್ನು ಹಾಕಿ ಪೂಜೆ ಸಲ್ಲಿಸಿ ಮುಂದೆ ಮೂರು ಪತ್ರವಳ್ಳಿ ಹಾಕಿ ಅದರಲ್ಲಿ ಅಂದು ಮಾಡಿದ ಅಡುಗೆಯನ್ನು ಎಡೆಯಾಗಿ ಹಾಕಿ ಮುಂದೆ ದೀಪ ಹಚ್ಚುತ್ತಾರೆ. ಆ ಬಳಿಕ ಬಾಣಂತಿಗೆ ಉರಿವ ದೀಪ ಕೈಗೆ ಕೊಟ್ಟು ಮೈ ತುಂಬ ಬಟ್ಟೆ ಹೊದಿಸಿ, ಆ ಸ್ಥಳಕ್ಕೆ ಕರೆದುಕೊಂಡು ಹೋಗಿ ಮೂರು ಸಾರಿ ಪ್ರದಕ್ಷಿಣೆ ಹಾಕಿಸಿ ಆ ಕಲ್ಲಿನ ಮೇಲೆ ಕೂಡಿಸುತ್ತಾರೆ. ಪಕ್ಕದಲ್ಲಿ ಒಂದು ಸಣ್ಣ ಕುಳಿ ತೋಡಿ ಅದರಲ್ಲಿ ಪೂಜೆ ಸಲ್ಲಿಸಿದ ಒಂದು ಕಲ್ಲು, ಎಡೆ, ಬೆಳ್ಳುಳ್ಳಿ ಹಾರ ಹಾಕಿ ಹೂಳುತ್ತಾರೆ. ಇನ್ನೊಂದು ಎಡೆಯನ್ನು ಬಾಣಂತಿ ಸ್ವಲ್ಪ ತಿಂದು ಉಳಿದುದನ್ನು ಗಂಡು ಮಕ್ಕಳಾದರೆ ಹೆಣ್ಣು ಮಕ್ಕಳಿಗೆ ಹೆಣ್ಣು ಮಗುವಾದರೆ ಗಂಡು ಚಿಕ್ಕ ಮಕ್ಕಳಿಗೆ ಕೊಟ್ಟು ಒಂದು ಬೆಳ್ಳುಳ್ಳಿ ಹಾರವನ್ನು ಅವಳು ಹಾಕಿಕೊಳ್ಳುತ್ತಾಳೆ. ಮೂರನೆಯದನ್ನು ಹೆಣ್ಣು ಮಗುವಾದರೆ ಗಂಡು ನಾಯಿಯನ್ನು, ಗಂಡು ಮಗು ಜನಿಸಿದ್ದರೆ ಹೆಣ್ಣು ನಾಯಿಯನ್ನು ಕರೆ ತಂದು ಅದಕ್ಕೆ ಸ್ನಾನ ಮಾಡಿಸಿ ಪೂಜೆ ಸಲ್ಲಿಸಿ ಅದರ ಕೊರಳಲ್ಲಿ ಒಂದು ಬೆಳ್ಳುಳ್ಳಿ ಹಾರ ಹಾಕಿ ಒಂದು ಎಡೆಯನ್ನು ತಿನ್ನಿಸಿ ನಾಯಿಯನ್ನು ಅರಚುವಂತೆ ಹೊಡೆಯುತ್ತಾರೆ. ಇದನ್ನು ಮಲ್ಲಿಕಾರ್ಜುನ ನಾಯಿ ಎನ್ನುತ್ತಾರೆ. ಆಮೇಲೆ ಅಲ್ಲೆ ನೆಲದ ಮೇಲೆ ಬೆಂಕಿ ಹಾಕಿ ಅದರಲ್ಲಿ ಎಣ್ಣೆ ಹಾಕಿ ಹೊಗೆ ಏಳಿಸುತ್ತಾರೆ. ಆಗ ಬಾಣಂತಿ ಎಣ್ಣೆ ದಾರ ನೀನು ತಗೋ ಹಾಲು ದಾರ ನನಗೆ ಕೊಡು ಎಂದು ಮೂರು ಸಾರಿ ಕೈ ಮುಗಿದು ಒಳಗೆ ಹೋಗುತ್ತಾಳೆ. ಮಂಡಲವೆಂದು ಮಣ್ಣಿನಿಂದ ಒಡ್ಡು ನಿರ್ಮಿಸಿದುದನ್ನು ಕೀಳಿ ಮಣ್ಣಿನಿಂದ ಮುಚ್ಚುತ್ತಾರೆ. ನಾಲ್ಕನೆಯ ದಿನ ಕಲ್ಲು ಹೂಳಿದ ಜಾಗದಲ್ಲಿ ಬೂದಿ ಎರಚುತ್ತಾರೆ.

**ಗಂಗಾ ಸ್ನಾನ**

ಹೆರಿಗೆಯಾದ ಏಳನೆಯ ದಿನಕ್ಕೆ ಇಲ್ಲವೇ ಒಂಬತ್ತನೇ ದಿನಕ್ಕೆ ತಣ್ಣೀರು ಮುಟ್ಟಿಸುವ ಕಾರ್ಯಕ್ರಮ ಇರುತ್ತದೆ. ತಮ್ಮವರಲ್ಲಿ ಒಬ್ಬರೊಂದಿಗೆ ಉಡಿಯಲ್ಲಿ ನವ ಧಾನ್ಯಗಳನ್ನು ತುಂಬಿಕೊಂಡು, ಬೇವಿನ ತಪ್ಪಲಿನಲ್ಲಿ ಬೆರಸಿಕೊಂಡು ದಾರಿಯಲ್ಲಿ ಉದುರಿಸಿಕೊಳ್ಳುತ್ತಾ ನೀರು ಇರುವ ಕೆರೆಗೋ ಬಾವಿಗೋ ಹೋಗುತ್ತಾರೆ. ಅಲ್ಲಿ ಮಣ್ಣಿನ ರಾಶಿ ಮಾಡಿ ಅದಕ್ಕೆ ಅರಿಷಿಣ, ಕುಂಕುಮ ಹಚ್ಚಿ ಹಂಗುನೂಲು ಏರಿಸಿ ತಾವು ತಂದ ತಂಬಿಗೆಯಲ್ಲಿ ನೀರು ತುಂಬಿ ಅದಕ್ಕೂ ಊದು ಬತ್ತಿ ಹಚ್ಚಿ ತೆಂಗಿನಕಾಯಿ ಒಡೆದು ನೀರಿನಲ್ಲಿ ಎಲೆ, ಅಡಿಕೆ ದಕ್ಷಿಣ ಹಾಕಿ ಆ ತಂಬಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ನೀರು ಚಿಮುಕಿಸುತ್ತಾ ಬಿಡಾರಕ್ಕೆ ಬರುವರು. ಬಂದ ತಕ್ಷಣ

ಮಗುವಿದ್ದ ಸ್ಥಳಕ್ಕೆ ಹೋಗಿ ಬಾಣಂತಿ ತನ್ನ ತಲೆಯ ಮೇಲೆ ನೀರು ಹಾಕಿಕೊಂಡು, ಮಗುವಿನ ಮೇಲೆ ಬೀಳುವಂತೆ ಮಾಡುತ್ತಾಳೆ. ನಂತರ ಮಗುವಿನ ಸ್ನಾನ ಮಾಡಿಸಿ ಹುಣಸೆಯ ಮರದ ತೊಗಟೆಯಿಂದಾಗಲಿ, ಎಡಪಕ್ಕದಲ್ಲಿ ಮತ್ತು ಬಲಪಕ್ಕ + ಅಥವಾ X ಹೀಗೆ ಗುರುತು ಆಗುವ ಹಾಗೆ ಸುಡುತ್ತಾರೆ. ಹೀಗೆ ಸುಡುವುದರಿಂದ ಮಗುವಿಗೆ ಗರ್ಭವಾಯು, ಹೊಟ್ಟೆ ಉಬ್ಬರ ಬರುವುದಿಲ್ಲವೆಂದು ಮತ್ತು ಮಗುವಿನ ಆರೋಗ್ಯ ಚೆನ್ನಾಗಿರುತ್ತದೆಂದು ನಂಬಿದ್ದಾರೆ.

**ಋತು ಸಂಪ್ರದಾಯ**

ಹೆಣ್ಣು ಬಾಲ್ಯಾವಸ್ತೆಯನ್ನು ಕಳೆದ ಮುಂದಿನ ಯೌವನ ದಿಶೆ, ಕೌಮಾರ್ಯ, ಯೌವನಾವಸ್ಥೆ ಅಂದರೆ ಇದೆ. ಈ ದಿಶೆಯಲ್ಲಿ ಶಾರೀರಿಕ ಬದಲಾವಣೆ ಮತ್ತು ಮಾನಸಿಕ ಸ್ವಸ್ಥ ಕೂಡ ಬದಲಾಗುತ್ತದೆ. ಇದನ್ನು ಒಂದು ಮಹತ್ವದ ಅವಕಾಶವೆಂದು ಪೂಜೆ ಪುರಸ್ಕಾರಗಳೊಂದಿಗೆ ಈ ಜನಾಂಗದಲ್ಲಿಯೂ ಕೂಡ ನಡೆಸುತ್ತಾರೆ. ಋತುವಾದ ಕ್ಷಣದಿಂದಲೇ ಮೈನೆರೆದ ಹುಡುಗಿಯ ಮನೆಯವರಿಗೆ ಹಾಗೂ ರಕ್ತಸಂಬಂಧಿಗಳಿಗೆ ಸೂತಕ ತಲೆದೋರುತ್ತದೆ. ಶುಭಕಾರ್ಯ ನಡೆಯುವ ಹಾಗಿಲ್ಲ ಮತ್ತು ಪೂಜೆ ಕೂಡ ಮಾಡುವ ಹಾಗಿಲ್ಲ.

ಈ ಸಮುದಾಯದಲ್ಲಿ ಹೆಣ್ಣು ರಸಜ್ವಲೆ ಆದಳೆಂದರೆ ಸೋದರಮಾವ ಅಥವಾ ತಾತನಿಂದ ಪ್ರತ್ಯೇಕ ಬಿಡಾರ ಮಾಡಿಸುತ್ತಾರೆ. ಒಂಬತ್ತು ದಿನಗಳವರೆಗೂ ಅವಳು ಅಲ್ಲಿಯೇ ವಾಸವಾಗಿರಬೇಕು. ಈ ವಿಷಯ ತಿಳಿದ ತಕ್ಷಣ ಅವಳ ಸೋದರಮಾವ ಬಂದು ಅವಳ ಮುಖ ನೋಡಿದಂತೆ ಮುಂದಕ್ಕೆ ಹೋಗಿ ಸ್ನಾನ ಮಾಡಿ ಹನುಮಂತ ದೇವರ ದರ್ಶನ ಮಾಡಿಕೊಂಡು ಆಮೇಲೆ ಅವಳ ಮುಖ ನೋಡುವನು. ಕುಂಬಾರನಿಂದ ತಂದ ಮಣ್ಣಿನ ಮಗಿ ಮತ್ತು ಪರ್ಯಾಣದಲ್ಲಿ ಊಟ ಮತ್ತು ನೀರು ಕೊಡುತ್ತಾರೆ. ಈ ಸಾಮಾನುಗಳನ್ನು ಯಾರು ಮುಟ್ಟಿಸಿಕೊಳ್ಳುವಂತಿಲ್ಲ. ಅಷ್ಟೇಕೆ ಅವಳ ಮುಖ ಕೂಡ ನೋಡುವಂತಿಲ್ಲ. ಬೆಳಕು ಹರಿಯುವ ಮೊದಲೇ ಬೆಳಗಿನ ನಿತ್ಯ ಕರ್ಮಗಳನ್ನು ಮಾಡಿಕೊಳ್ಳಬೇಕು.

ಋತುಮತಿಯಾದವಳಿಗೆ ಆಹಾರವಾಗಿ ಉಪ್ಪು ಹಾಕದಂತೆ ಮಾಡಿದ ಕಿಚಿಡಿ, ಗೋಧಿ ಪಾಯಸ, ಕೊಬ್ಬರಿ–ಬೆಳ್ಳ–ಉತ್ತುತ್ತಿ ಕೂಡಿಸಿ ಪುಡಿ ಮಾಡಿ ತಿನ್ನಲು ಕೊಡುವರು. ಇಂತಹ ಆಹಾರ ತಿನ್ನುವುದರಿಂದ ಸೊಂಟಕ್ಕೆ ಶಕ್ತಿ ಬರುತ್ತದೆ. ಸ್ತನದ ಬೆಳವಣಿಗೆ, ಶರೀರಕ್ಕೆ ನುಣುಪು ಬರುತ್ತದೆ ಎಂದು ಹೇಳುತ್ತಾರೆ. ಸುತ್ತಮುತ್ತಲಿನ ತಮ್ಮ ಸಮುದಾಯದವರು ಸಹ ಸಿಹಿ ಅಡುಗೆ ಮಾಡಿ ತಂದು ಉಣಬಡಿಸುವರು.

ಇವರಲ್ಲಿ ಐದು ಅಥವಾ ಏಳು ದಿನದಲ್ಲಿ ಸೂತಕ ಕಳೆಯುವದು ಕಂಡುಬರುತ್ತದೆ. ಅಂದು ತಮ್ಮ ಬಿಡಾರವನ್ನು ಸಾರಿಸಿ, ಗೋಮೂತ್ರ ಪ್ರೋಕ್ಷಿಸಿಕೊಳ್ಳುವರು. ಅಂದು ಆ ಹುಡುಗಿಗೆ ಸ್ನಾನ ಮಾಡಿಸಿ ಹನುಮಪ್ಪನ ಗುಡಿಗೆ ಹೋಗಿ ಎಣ್ಣೆ ಹಾಕಿ ದೀಪ ಹೊತ್ತಿಸಿ ಬರುತ್ತಾಳೆ. ಇನ್ನು ಕೆಲವು ಕಡೆ ಅವಳ ಸೋದರಮಾವ ಅವಳ ಮುಖದ ಮುಂದೆ ಕೋಳಿಯ

ಪ್ರಸ್ತುತ ಅಧ್ಯಾಯನಕ್ಕೆ ಸಂಬಂಧಿಸಿದಂತೆ ದತ್ತಾಂಶಗಳ ನಿರೂಪಣೆ ಮತ್ತು ವಿಶ್ಲೇಷಣೆಯನ್ನು ಈ ಸಂಶೋಧನಾ ಅಧ್ಯಯನದಲ್ಲಿ ಹಾಕಿಕೊಂಡ ಉದ್ದೇಶಗಳಿಗೆ ಅನುಗುಣವಾಗಿ ಮತ್ತು ಕ್ರಮಬದ್ಧವಾಗಿ ಅರ್ಥಪೂರ್ಣವಾದಂತಹ ವಿಶ್ಲೇಷಣೆಗೆ ಒಳಪಡಿಸಿ ಅರ್ಥಕಲ್ಪಿಸುವ ಕಾರ್ಯವನ್ನು ಈ ಒಂದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಸಂಖ್ಯಾಶಾಸ್ತ್ರದ ಅತಿ ಮಹತ್ವದ ಹಂತವೆಂದರೆ ದತ್ತಾಂಶ ಸಂಗ್ರಹಣೆ ದತ್ತಾಂಶವನ್ನು ಸಂಖ್ಯಾಶಾಸ್ತ್ರದ ಅಡಿಪಾಯವೆಂದು ಕರೆಯಲಾಗುತ್ತದೆ. ದತ್ತಾಂಶಗಳನ್ನು ಸಂಗ್ರಹ ಮಾಡುವ ವಿವಿಧ ಹಂತಗಳ ಪರಿಜ್ಞಾನ ಬಹಳ ಮುಖ್ಯವಾದುದಾಗಿದೆ. ಕಾರಣ ಸರಿಯಾದ ದತ್ತಾಂಶ ಸಂಗ್ರಹಣೆಯಾಗದಿದ್ದಾಗ ಅವುಗಳಿಂದ ಗಳಿಸುವ ಫಲಿತಾಂಶವನ್ನು ಸಹ ಸರಿಯಾಗಿರುವುದಿಲ್ಲ. ಇದರಿಂದ ತಪ್ಪು ವಿಶ್ಲೇಷಣೆಗೆ ತಪ್ಪು ಅರ್ಥೈಸುವಿಕೆಗೆ ದಾರಿಮಾಡಿಕೊಟ್ಟಂತಾಗುತ್ತದೆ. ಸಮರ್ಪಕವಾದ ದತ್ತಾಂಶ ಸಂಗ್ರಹಣೆಯಿಂದ ಸಮಯ, ಹಣ ಎಲ್ಲವು ವ್ಯರ್ಥವಾಗುತ್ತದೆ. ಆದ್ದರಿಂದ ದತ್ತಾಂಶಗಳನ್ನು ಅತಿ ಜಾಗರೂಕತೆಯಿಂದ ನಿರ್ವಹಿಸಬೇಕಾಗುತ್ತದೆ. ಸಂಶೋಧನೆಯ ಉದ್ದೇಶ, ಗುರಿ ಮತ್ತು ಉಪಯೋಗಗಳಿಗೆ ಅನುಗುಣವಾಗಿ ಬೇರೆ ಬೇರೆ ಸಮೀಕ್ಷೆ ವಿಧಾನಗಳನ್ನು ಆಯ್ಕೆ ಮಾಡಿಕೊಳ್ಳುವುದು ಸೂಕ್ತ ಮಾರ್ಗವಾಗುತ್ತದೆ. ಪ್ರತಿಯೊಂದು ಹಂತದಲ್ಲೂ ಸಮೀಕ್ಷೆ ನಡೆಸುವ ಯಾವ ಯಾವ ಸಾಧನಗಳನ್ನು ಸಮೀಕ್ಷೆ ನಡೆಸಲು ಮುಖ್ಯವಾಗಿ ಪೂರ್ವದಲ್ಲಿ ಪೂರ್ವಕಲ್ಪನೆಗಳು ಬಹು ಮುಖ್ಯವಾಗುತ್ತದೆ. ಈ ಪೂರ್ವಕಲ್ಪನೆಗಳಿಗೆ ಬೇಕಾದ ಅಂಕಿ-ಅಂಶಗಳನ್ನು ಸಂಗ್ರಹಿಸುವಲ್ಲಿ ಸುಲಭ ಮಾರ್ಗವನ್ನು ಬಳಕೆ ಮಾಡಿಕೊಳ್ಳಲು ಅನುಕೂಲವಾಗುತ್ತದೆ.

೧. ಕುಟುಂಬದ ಆರ್ಥಿಕ ಸ್ಥಿತಿಯ ವಿವರ

| ಕ್ರಸಂ. | ವಿವರಣೆ | ಮಾಹಿತಿದಾರರು | ಪ್ರತಿಶತ |
|---|---|---|---|
| ೧. | ಉತ್ತಮವಾಗಿದೆ | ೨೦ | ೪೦ |
| ೨. | ಉತ್ತಮವಾಗಿಲ್ಲ | ೩೦ | ೬೦ |
| ೩. | ಒಟ್ಟು | ೫೦ | ೧೦೦ |

ಮೇಲಿನ ಕೋಷ್ಟಕದಿಂದ ತಿಳಿದುಬರುವುದೆನೆಂದರೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಎರಡು ಗ್ರಾಮಗಳಲ್ಲಿನ ಬುಡ್ಗ ಜಂಗಮ ಸಮುದಾಯದವರಲ್ಲಿನ ಕೃಷಿ ಕೂಲಿ, ಪ್ಲಾಸ್ಟಿಕ್ ಬುಟ್ಟಿಗಳ ಮಾರಾಟ, ಹಣ್ಣುಗಳ ಮಾರಾಟ, ಮಕ್ಕಳ ಆಟಕ್ಕಿ ಸಾಮಾನುಗಳ ಮಾರಾಟ ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ವಲಸೆ ಹೋಗಿ ಸಣ್ಣ ಪುಟ್ಟ ಕೂಲಿ ಕೆಲಸದಲ್ಲಿ ತೊಡಗಿರುವ ೫೦ ಮಾಹಿತಿದಾರರನ್ನು ಸಂದರ್ಶಿಸಿದಾಗ ಅವರ ಕೌಟುಂಬಿಕ ಆರ್ಥಿಕ ಸ್ಥಿತಿಯ ಬಗ್ಗೆ ಪ್ರಶ್ನಿಸಿದಾಗ ಅವರಿಂದ ಬಂದ ಉತ್ತರವೇನೆಂದರೆ ೨೦ ಜನ ಮಾಹಿತಿದಾರರು ಮೇಲಿನ ಕೆಲಸವನ್ನು ಅನುಸರಿಸುತ್ತಿರುವುದರಿಂದ ಅವರ ಕೌಟುಂಬಿಕ ಆರ್ಥಿಕ ಸ್ಥಿತಿಯು ಉತ್ತಮವಾಗಿದೆ ಎಂದು ಹೇಳಿದ್ದಾರೆ. ಆದರೆ ೩೦ ಜನ ಮಾಹಿತಿದಾರರು ಅದೇ ವೃತ್ತಿಯಲ್ಲಿ ತೊಡಗಿದರು ಸಹ ಅದರಿಂದ ಬರುವ ಆದಾಯ ಕಡಿಮೆಯಾಗಿದೆ. ಇದರಿಂದ ತಮ್ಮ ಜೀವನ ನಡೆಸಲು ಕಷ್ಟಕರವಾಗಿದೆ. ಹಾಗೂ ಕುಟುಂಬದ ವೆಚ್ಚವನ್ನು ಬರಿಸಲು ಸಾಧ್ಯವಾಗುತ್ತಿಲ್ಲ. ಇದರಿಂದ ಅವರ ಕೌಟುಂಬಿಕ ಆರ್ಥಿಕ ಸ್ಥಿತಿಯು ಉತ್ತಮವಾಗಿಲ್ಲ ಎಂದು ಹೇಳಿದ್ದಾರೆ.

**ವೃತ್ತ ಚಿತ್ರ ೪.೧. ಕುಟುಂಬದ ಆರ್ಥಿಕ ಸ್ಥಿತಿಯ ವಿವರ**





### ನಕ್ಷೆಯ ವಿವರ

ಮೇಲಿನ ನಕ್ಷೆದಿಂದ ತಿಳಿದುಬರುವುದೇನೆಂದರೆ ಒಟ್ಟು ೫೦ರಷ್ಟು ಮಾಹಿತಿದಾರರನ್ನು ಸಂದರ್ಶಸಿದಾಗ ಅದರಲ್ಲಿ ೨೦ರಷ್ಟು ಮಾಹಿತಿದಾರರು ಆರ್ಥಿಕ ಸ್ಥಿತಿಗತಿಯು ಉತ್ತಮವಾಗಿದೆ, ೩೦ರಷ್ಟು ಮಾಹಿತಿದಾರರು ಆರ್ಥಿಕ ಸ್ಥಿತಿಯು ಉತ್ತಮವಾಗಿಲ್ಲವೆಂದು ಹೇಳಿದ್ದಾರೆ, ವೃತ್ತ ಚಿತ್ರದಿಂದ ಹೇಳುವುದಾದರೆ ೪೦ರಷ್ಟು ಉತ್ತಮವಾದ ಆರ್ಥಿಕ ಸ್ಥಿತಿಯನ್ನು ಹೊಂದಿದ್ದಾರೆ, ೬೦ರಷ್ಟು ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲ ಎಂದು ತಿಳಿದು ಬರುತ್ತದೆ.

### ೨. ವೃತಿಯವಾರು ವಿವರ

| ಕ್ರಸಂ | ವಿವರಣೆ | ಮಾಹಿತಿದಾರರು | ಪ್ರತಿಶತ |
|---|---|---|---|
| ೧. | ಹೌದು | ೨೭ | ೫೪ |
| ೨. | ಇಲ್ಲ | ೨೩ | ೪೬ |
| ೩. | | ೫೦ | ೧೦೦ |

ಮೇಲಿನ ಕೋಷ್ಟಕದಿಂದ ತಿಳಿದಿರುವುದೇನೆಂದರೆ ಬುಡ್ಗ ಜಂಗಮ ಸಮುದಾಯದ ಒಟ್ಟು ೫೦ ಜನ ಮಾಹಿತಿದಾರರನ್ನು ಸಂದರ್ಶಿಸಿದಾಗ ೨೪ ಜನ ಮಾಹಿತಿದಾರರು ಭವಿಷ್ಯದಲ್ಲಿ ತಮ್ಮ ಮೂಲ ವೃತ್ತಿಯಾದ ಹಗಲುವೇಷಗಾರಿಕೆಯನ್ನು ಅನುಸರಿಸುತ್ತಿರುವುದು ತಿಳಿದುಬರುತ್ತದೆ. ಕಾರಣ ತಮ್ಮ ಕಲೆಯನ್ನು ಉಳಿಸಿಕೊಂಡು ಬರಲು ಈ ವೃತ್ತಿಯಲ್ಲಿ ತೊಡಗಿದ್ದಾರೆ. ೨೩ ಜನ ಮಾಹಿತಿದಾರರು ಭವಿಷ್ಯದಲ್ಲಿ ಈ ವೃತ್ತಿಯನ್ನು ಬಯಸುವುದಿಲ್ಲವೆಂದು ಹೇಳಿದ್ದಾರೆ. ಏಕೆಂದರೆ ಈ ವೃತ್ತಿಯಿಂದ ಹೊಟ್ಟೆ ತುಂಬಿಸಿಕೊಳ್ಳಲು ಕೇವಲ ದವಸ ಧಾನ್ಯಗಳು, ಬಟ್ಟೆಗಳು, ಜನರು ಕೊಡುವ ಬಿಡಿಗಾಸು ಇವುಗಳಿಂದ ತಮ್ಮ ಜೀವನ ನಡೆಸಲು ಕಷ್ಟಕರವಾಗಿದೆ. ಇದರಿಂದ ಭವಿಷ್ಯದಲ್ಲಿ ಈ ವೃತ್ತಿಯನ್ನು ಅನುಸರಿಸುವುದಿಲ್ಲ. ಇವರು ಜೀವನದಲ್ಲಿ ಉತ್ತಮ ಜೀವನ ಮಟ್ಟ ರೂಪಿಸಿಕೊಳ್ಳಲು ತಮ್ಮ ವಿವಿಧ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು, ಅಧಿಕ ಆದಾಯವನ್ನು ಹೊಂದಲು, ಪರ್ಯಾಯ ವೃತ್ತಿಗಳ ಕಡೆ ಗಮನವನ್ನು ಹರಿಸಿದ್ದಾರೆ. ಉದಾ. ಪ್ಲಾಸ್ಟಿಕ್ ಬುಟ್ಟಿಗಳ ಮಾರಾಟ, ಬಟ್ಟೆ ಮಾರಾಟ, ಹೂ, ಹಣ್ಣು ತರಕಾರಿಗಳ ಮಾರಾಟ ಇವುಗಳಿಂದ ಆದಾಯವನ್ನು ಗಳಿಸಲು ವ್ಯವಹಾರಗಳಲ್ಲಿ ತೊಡಗಿದ್ದಾರೆ. ಈ ಸಮುದಾಯದವರು ಅಭಿವೃದ್ಧಿಯ ಕಡೆಗೆ ಗಮನವನ್ನು ಕೇಂದ್ರೀಕರಿಸಿದ್ದಾರೆ.

ಲಂಬ ಚಿತ್ರ ೪.೧. ವೃತಿಯವಾರು ವಿವರ




**ನಕ್ಷೆಯ ವಿವರ**

ಮೇಲಿನ ನಕ್ಷೆಯಿಂದ ತಿಳಿದಿರುವುದೇನೆಂದರೆ ಒಟ್ಟು ೫೦ ಮಾಹಿತಿದಾರರನ್ನು ಸಂದರ್ಶಸಿದಾಗ ಅದರಲ್ಲಿ ೨೭ ರಷ್ಟು ಮಾಹಿತಿದಾರರು ಭವಿಷ್ಯದಲ್ಲಿ ಇದೆ. ವೃತ್ತಿಯನ್ನು ಬಯಸುತ್ತಾರೆಂದು ಹೇಳಿದ್ದಾರೆ. ೨೩ ರಷ್ಟು ಮಾಹಿತಿದಾರರು ಭವಿಷ್ಯದಲ್ಲಿ ಇದೆ ವೃತ್ತಿಯನ್ನು ಬಯಸುವುದಿಲ್ಲವೆಂದು ಹೇಳುತ್ತಾರೆ. ರೇಖಾಚಿತ್ರದಿಂದ ಹೇಳುವುದಾದರೆ ೫೪ ರಷ್ಟು ಮಾಹಿತಿದಾರರು ಭವಿಷ್ಯದಲ್ಲಿ ಈ ವೃತ್ತಿಯನ್ನು ಬಯಸುವುದಿಲ್ಲವೆಂದು ತಿಳಿದುಬರುತ್ತದೆ.

**೩. ಆರೋಗ್ಯದ ಸ್ಥಿತಿಯ ವಿವರ**

| ಕ್ರ.ಸಂ | ವಿವರಣೆ | ಮಾಹಿತಿದಾರರು | ಪ್ರತಿಶತ |
|---|---|---|---|
| ೧. | ಉತ್ತಮ | ೩೫ | ೭೦ |
| ೨. | ಉತ್ತಮವಾಗಿಲ್ಲ | ೧೫ | ೩೦ |
| ೩. | ಒಟ್ಟು | ೫೦ | ೧೦೦ |

ಮೇಲಿನ ಕೋಷ್ಟಕದಿಂದ ತಿಳಿದು ಬರುವುದೇನೆಂದರೆ ಈ ಸಮುದಾಯವು ಒಟ್ಟು ೫೦ ಜನ ಮಾಹಿತಿದಾರರನ್ನು ಸಂದರ್ಶಿಸಿದಾಗ ಅದರಲ್ಲಿ ೩೫ ರಷ್ಟು ಮಾಹಿತಿದಾರರು ಆರೋಗ್ಯದ ಸ್ಥಿತಿ ಉತ್ತಮವಾಗಿದೆ. ೧೫ ಜನ ಮಾಹಿತಿದಾರರು ಆರೋಗ್ಯ ಸ್ಥಿತಿ ಉತ್ತಮವಾಗಿಲ್ಲವೆಂದು ಹೇಳಿದ್ದಾರೆ. ಇವರು ಒಂದೇ ಪ್ರದೇಶದಲ್ಲಿ ನೆಲೆಸಿರುವ ಕುಟುಂಬಗಳ ಸಂದರ್ಶನದಲ್ಲಿ ೩೫ ಮಾಹಿತಿದಾರರು ಆರೋಗ್ಯದ ಸ್ಥಿತಿ ಉತ್ತಮವಾಗಿದೆ ಎಂದು ಹೇಳಿದ್ದಾರೆ. ಏಕೆಂದರೆ ಆ ಪ್ರದೇಶದಲ್ಲಿ ಅವರಿಗೆ ಆರೋಗ್ಯಕ್ಕೆ ಸಂಬಂಧಿಸಿದ ಔಷಧಿಗಳು ಮತ್ತು ಸರ್ಕಾರಿ ಆಸ್ಪತ್ರೆಗಳು ದೊರೆಯುತ್ತದೆ. ಆದ್ದರಿಂದ ಆರೋಗ್ಯದ ಸ್ಥಿತಿ ಉತ್ತಮವಾಗಿದೆ. ಇನ್ನು ಕುಟುಂಬದಿಂದ

ಅಲೆಮಾರಿಗಳಾಗಿ ಊರಿಂದ ಊರಿಗೆ ವಲಸೆ ಹೋಗುವ ೧೫ ಜನ ಮಾಹಿತಿದಾರರನ್ನು ಸಂದರ್ಶಿಸಿದಾಗ ಅವರು ಆರೋಗ್ಯದ ಸ್ಥಿತಿ ಉತ್ತಮವಾಗಿಲ್ಲವೆಂದು ಹೇಳಿದ್ದಾರೆ. ಏಕೆಂದರೆ ಪ್ರದೇಶದಿಂದ ಪ್ರದೇಶಕ್ಕೆ ಅವಗುಣದಲ್ಲಿ ಹೆಚ್ಚು ಕಡಿಮೆಯಾಗಿ, ನೀರಿನ ಬದಲಾವಣೆಯಿಂದ ಅನಾರೋಗ್ಯದಿಂದ ಬಳಲುತ್ತಿದ್ದಾರೆ ಎಂದು ತಿಳಿಯಲಾಗಿದೆ. ಇದರಿಂದ ಇವರ ಆರೋಗ್ಯ ಸ್ಥಿತಿ ಉತ್ತಮವಾಗಿಲ್ಲವೆಂದು ತಿಳಿಯಲಾಗಿದೆ. ರೇಖಾಚಿತ್ರದಿಂದ ಹೇಳುವುದಾದರೆ ೭೦ರಷ್ಟು ಆರೋಗ್ಯದ ಸ್ಥಿತಿ ಉತ್ತಮವಾಗಿದೆ. ೩೦ರಷ್ಟು ಆರೋಗ್ಯದ ಸ್ಥಿತಿ ಉತ್ತಮವಾಗಿಲ್ಲ ಎಂದು ತಿಳಿಯಲಾಗಿದೆ.

**ವೃತ್ತ ಚಿತ್ರ ೪.೨. ಆರೋಗ್ಯದ ಸ್ಥಿತಿಯ ವಿವರ**




**ನಕ್ಷೆಯ ವಿವರ**

ಮೇಲಿನ ನಕ್ಷೆಯಿಂದ ತಿಳಿದು ಬರುವುದೇನೆಂದರೆ ಒಟ್ಟು ೫೦ರಷ್ಟು ಮಾಹಿತಿದಾರರನ್ನು ಸಂದರ್ಶಸಿದಾಗ ಅದರಲ್ಲಿ ೩೫ರಷ್ಟು ಮಾಹಿತಿದಾರರು ಆರೋಗ್ಯ ಸ್ಥಿತಿಗತಿಯನ್ನು ಉತ್ತಮವಾಗಿದೆಯೆಂದು ಹೇಳಿದ್ದಾರೆ, ೧೫ರಷ್ಟು ಮಾಹಿತಿದಾರರು ಉತ್ತಮವಾಗಿಲ್ಲದ ಆರೋಗ್ಯ ಸ್ಥಿತಿಯೆಂದು ಹೇಳಿದ್ದಾರೆ, ರೇಖಾಚಿತ್ರದಿಂದ ಹೇಳುವುದಾದರೆ ೭೦ರಷ್ಟು ಆರೋಗ್ಯ ಸ್ಥಿತಿ ಉತ್ತಮವಾಗಿದೆ, ೩೦ರಷ್ಟು ಆರೋಗ್ಯ ಸ್ಥಿತಿಯು ಉತ್ತಮವಾಗಿರುವುದಿಲ್ಲವೆಂದು ತಿಳಿದುಬರುತ್ತದೆ.

**೪. ಸರ್ಕಾರಿ ಸೌಲಭ್ಯಗಳ ವಿವರ**

| ಕ್ರಸಂ | ವಿವರಣೆ | ಮಾಹಿತಿದಾರರು | ಪ್ರತಿಶತ |
|---|---|---|---|
| ೧. | ಸೌಲಭ್ಯ ಪಡೆದವರು | ೨೫ | ೫೦ |
| ೨. | ಇರುವವರು ಸೌಲಭ್ಯ ಪಡೆಯದೆ | ೨೫ | ೫೦ |
| ೩. | ಒಟ್ಟು | ೫೦ | ೧೦೦ |

ಮೇಲಿನ ಕೋಷ್ಟಕದ ಮೂಲಕ ಹೇಳುವುದಾದರೆ, ಈ ಸಮುದಾಯದ ಒಟ್ಟು ೫೦ ಜನ ಮಾಹಿತಿದಾರರನ್ನು ಸಂದರ್ಶಿಸಿದಾಗ ಅದರಲ್ಲಿ ೨೫ರಷ್ಟು ಮಾಹಿತಿದಾರರು ಸರ್ಕಾರಿ ಸೌಲಭ್ಯ

ಹೊಂದಿದ್ದಾರೆ ಎಂದು ತಿಳಿದುಬರುತ್ತದೆ. ಏಕೆಂದರೆ ಇವರು ಒಂದು ಪ್ರದೇಶದಲ್ಲಿ ನೆಲೆ ಹೊಂದಿರುವ ಜನರಾಗಿದ್ದಾರೆ. ಆದ್ದರಿಂದ ಇವರಿಗೆ ವಸತಿ ಸೌಕರ್ಯಗಳು, ನೀರಿನ ಸೌಲಭ್ಯ, ಆರೋಗ್ಯದ ಸೌಲಭ್ಯ, ಶಾಲೆಯ ಸೌಲಭ್ಯ, ಗುರುತಿನ ಚೀಟಿ, ಪಡಿತರ ಚೀಟಿ, ಆಧಾರ ಕಾರ್ಡ್ ಹೀಗೆ ಬ್ಯಾಂಕ್ ಖಾತೆಗಳನ್ನು ಸಹ ಹೊಂದಿದ್ದಾರೆ. ಹೀಗೆ ೨೫ರಷ್ಟು ಮಾಹಿತಿದಾರರು ಸರ್ಕಾರಿ ಸೌಲಭ್ಯಗಳನ್ನು ಹೊಂದಿದ್ದಾರೆ. ೨೫ರಷ್ಟು ಮಾಹಿತಿದಾರರು ಸರ್ಕಾರಿ ಸೌಲಭ್ಯವನ್ನು ಹೊಂದಿರುವುದಿಲ್ಲ. ಏಕೆಂದರೆ ಕಲೆಗಾಗಿ ಊರಿನಿಂದ ಊರಿಗೆ ಅಲೆಯುವ ಈ ಜನಸಮುದಾಯದವರಿಗೆ ಸರ್ಕಾರಿ ಸೌಲಭ್ಯ ದೊರೆಯುತ್ತಿರುವುದಿಲ್ಲವೆಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

**ಲಂಬ ಚಿತ್ರ ೪.೨. ಸರ್ಕಾರಿ ಸೌಲಭ್ಯಗಳ ಪ್ರಮಾಣ**




**ನಕ್ಷೆಯ ವಿವರ**

ಮೇಲಿನ ನಕ್ಷೆಯ ಮೂಲಕ ಹೇಳುವುದಾದರೆ, ಒಟ್ಟು ೫೦ ಮಾಹಿತಿದರರನ್ನು ಸಂದರ್ಶಿಸಿದಾಗ ಅದರಲ್ಲಿ ೨೫ರಷ್ಟು ಸರ್ಕಾರಿ ಸೌಲಭ್ಯಗಳನ್ನು ಹೊಂದಿದ್ದಾರೆ ಎಂದು ತಿಳಿದು ಬರುತ್ತದೆ. ಇನ್ನು ೨೫ರಷ್ಟು ಮಾಹಿತಿದಾರರು ಯಾವುದೇ ಸರ್ಕಾರಿ ಸೌಲಭ್ಯಗಳನ್ನು ಹೊಂದಿರುವುದಿಲ್ಲವೆಂದು ತಿಳಿದುಬರುತ್ತದೆ. ರೇಖಾ ಚಿತ್ರದಿಂದ ತಿಳಿದುಬರುವುದೆನೆಂದರೆ, ೫೦ರಷ್ಟು ಮಾಹಿತಿದಾರರು ಸರ್ಕಾರಿ ಸೌಲಭ್ಯಗಳನ್ನು ಪಡೆದುಕೊಂಡಿದ್ದಾರೆ. ಇನ್ನು ೫೦ ರಷ್ಟು ಮಾಹಿತಿದಾರರು ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗಿದ್ದಾರೆಂದು ರೇಖಾ ಚಿತ್ರದಿಂದ ತಿಳಿದುಬರುತ್ತದೆ.

## ೪.೨. ಬುರ್ರಕಥಾ ಮತ್ತು ಆರ್ಥಿಕತೆ

'ಬುರ್ರಕಥೆ' ಎನ್ನುವುದು ಹಾಡುವಾಗ ಬಳಸುವ ವಾದ್ಯ ಪರಿಕರದಿಂದ ಬಂದಿದೆ. ಬುರ್ರವನ್ನು ನುಡಿಸುತ್ತ ಹಾಡುವ ಕಥೆಗಳಿಗೆ 'ಬುರ್ರಕಥೆ'ಗಳೆಂದು ಕರೆಯುತ್ತಾರೆ. 'ಬುರ್ರ' ಎನ್ನುವುದು ಮೂಲತಃ ತಂಬೂರಿಯಿಂದ ಬಂದ ಪದವಾಗಿದೆ. ತಂಬೂರಿ ತಂತಿ+ಬುರ್ರಿ= ತಂಬೂರಿ ಆಗಿದೆ. ತಂತಿ+ಬುರ್ರ= ತಂಬೂರ ಈ ಮಾಸದಲ್ಲಿ 'ತಂ' ಲೋಪವಾಗಿ ಬಂದು ಬುರ್ರ ಆಗಿ ಪರಿಣಮಿಸಿದೆ. ಕನ್ನಡದಲ್ಲಿ ಬುರ್ರ ಎಂದರೆ ತಲೆ, ಬುರುಡೆ ಎಂದರ್ಥ. ದುಂಡಾಗಿ, ಟೊಳ್ಳಾಗಿರುವ ವಸ್ತುವನ್ನು ಬುರುಡೆ ಎಂದು ಕರೆಯುತ್ತಾರೆ. ಈ ಬುರ್ರದ ತಳಭಾಗದಲ್ಲಿ ತಂತಿ ಬಿಗಿದಿರುವ ಸ್ಥಳ ತೆಳ್ಳಗೆ ಚಪ್ಪಟೆಯಾಗಿದ್ದು ಉಳಿದ ಭಾಗ ಗೋಲಾಕಾರವಾಗಿದ್ದು ಒಳಗೆ ಟೊಳ್ಳಾಗಿರುತ್ತದೆ. ಇದಕ್ಕೆ ಸಹ ವಾದ್ಯವಾಗಿ ಗುಮ್ಮಟೆ, ತಾಳಗಳನ್ನು ಉಪಯೋಗಿಸುತ್ತಾರೆ.

ಬುರ್ರಕಥೆ ಇದೊಂದು ಸಮಿಶ್ರ ಕಲೆ. ಇಲ್ಲಿ ಸಾಹಿತ್ಯ, ಸಂಗೀತ, ನೃತ್ಯ, ಅಭಿನಯಕ್ಕೆ ಹೆಚ್ಚು ಮಹತ್ವ ಕೊಡಲಾಗುತ್ತದೆ. ಚಂಪೂ ಕಾವ್ಯದಂತೆ ಬುರ್ರ ಕಥನ ಕಾವ್ಯಗಳು ಗದ್ಯ, ಪದ್ಯ ಮಿಶ್ರಿತವಾಗಿರುತ್ತವೆ. ಯಾವ ರಂಗ ಸಜ್ಜಿಕೆ ಇಲ್ಲವೆ ಬಯಲಿನಲ್ಲಿಯೂ ಪ್ರದರ್ಶನಗೊಳ್ಳುವ ಈ ಕಲೆಯಲ್ಲಿ ಮೂವರು ಭಾಗವಹಿಸುವರು. ಒಬ್ಬ ಪ್ರಧಾನ ಗಾಯಕ ಇಬ್ಬರು ಅವನಿಗೆ ಹಿಮ್ಮೇಳವಾಗಿ ಹಾಡುತ್ತಾರೆ. ಬುರ್ರಕಥೆ ಪಿತಾಮಹ ಶೇಖ್ ನಾಜರ್ ಅವರು "ಜಂಗಮ ಕಥೆಗಳಿಂದ ಬುರ್ರಕಥೆಗಳು ಹುಟ್ಟಿಕೊಂಡಿವೆ" ಎಂದು ಹೇಳಿದ್ದಾರೆ. ಜಂಗಮ ಎಂದರೆ ವೀರಶೈವ ಮತ ಪ್ರಚಾರ ಮಾಡುವ ಭಕ್ತ ಸಮೂಹ ಎನ್ನುವ ಅರ್ಥ ಆಂಧ್ರದಲ್ಲಿದೆ. ಹಿಂದೆ ಶಿವನ ಲೀಲೆಗಳನ್ನು ಶಿವಶರಣರ ಚರಿತ್ರೆಗಳನ್ನು ಹಾಡುತ್ತಿರಬಹುದೆಂದು ತೋರುತ್ತದೆ. ಬಹುರೂಪಿ ಚೌಡಯ್ಯ ಎಂಬತ್ನಾಲ್ಕು ಲಕ್ಷ ಶಿವನ ವೇಷಗಳನ್ನು ಧರಿಸಿ ಅನೇಕ ಶಿಷ್ಯ ವರ್ಗವನ್ನು ಕಟ್ಟಿ ಅವರ ಜೊತೆಗೆ ವೀರಶೈವ ಮತ ಪ್ರಚಾರದಲ್ಲಿ ತೊಡಗಿರುವುದು ಅವನ ವಚನಗಳಿಂದ ತಿಳಿದುಬರುತ್ತದೆ. ಆ ಸಂದರ್ಭದಲ್ಲಿ ವೇಷದ ಜೊತೆಗೆ ಶಿವನ ಲೀಲೆಗಳು ಶಿವಶರಣರ ಚರಿತ್ರೆಗಳ ಕುರಿತು ಕಥೆಗಳನ್ನು ಕಟ್ಟಿ ಹಾಡುತ್ತಿರುವುದರಿಂದ ಇದು ಜಂಗಂ ಕಥೆಗಳಾಗಿವೆ.

'ಬುರ್ರಕಥೆ' ಎನ್ನುವುದು ಆಂಧ್ರಪ್ರದೇಶದಲ್ಲಿ ಅತ್ಯಂತ ಜನಪ್ರಿಯತೆ ಹೊಂದಿದ ಜಾನಪದ ಕಲೆ. ಬುರ್ರಕಥಾ ಮೇಳಗಳನ್ನು ನಡೆಸುವವರು ಬುಡ್ಗ ಜಂಗಮ ಸಮುದಾಯದವರು. ಈ ಬುರ್ರಕಥೆಗಳನ್ನು ತೆಲುಗಿನಲ್ಲಿ ತಂದಾನಿ ಕಥೆ, ಶಾರದ ಕಾಂಡ್ರು, ಜಂಗಮ ಕಥೆ, ಗುಮ್ಮಟಿ ಕಥೆ ಎಂತಲೂ ಕರೆಯುತ್ತಾರೆ. ಈ ಬುರ್ರಕಥೆಗಳನ್ನು ಹಾಡುವ ವರ್ಗವನ್ನು 'ಸಂಚಾರಿ ಗಾಯಕ ಭಿಕ್ಷವುಲು' ಎಂದು ಕರೆಯುತ್ತಾರೆ. (ಬುರ್ರಕಥೆ ಈರಮ್ಮ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ೨೦೦೬, ಪುಟ ಸಂಖ್ಯೆ ೫೦)

ಕಥೆ ಹೇಳಿದರೆ ಬುಡ್ಗ ಜಂಗಮ ಜನಾಂಗದವರು ಹೇಳಿದಂತೆ ಹೇಳಬೇಕು. ಇದು ಬುಡ್ಗ ಜನಾಂಗದ ಕಲೆಯ ಬಗ್ಗೆ ಪ್ರಚಲಿತದಲ್ಲಿರುವ ಮಾತು. ಮೂಲತಃ ಆಂಧ್ರಪ್ರದೇಶದವರಾದ

ಇವರ ಕುಲಕಸುಬು ಕಥೆ ಹೇಳುವುದು ಆಗಿದೆ. ಹಿಂದೆ ಜನರಲ್ಲಿ ಸ್ವತಂತ್ರ ಕಿಚ್ಚು ಹಚ್ಚಲು ಬಳಕೆಯಾಗಿದ್ದ ಇವರ ಕಲೆ ಇದೀಗ ಭಿಕ್ಷಾಟನೆಗೆ ಬಳಕೆಯಾಗುತ್ತಿರುವುದು ವಿಷಾದನೀಯ ಸಂಗತಿ. ಗಂಡಸರು ವೀರಾವೇಷದ ಕಥೆ ಹೇಳಿದರೆ ಹೆಂಗಸರು ಹೊಟ್ಟೆ ಹೊರೆಯಲು ನೆರವಾಗುತ್ತಾರೆ. ಉಳಿದಂತೆ ಪ್ರಾಣಿ ಸಾಕಾಣಿಕೆ ಕೈ ಖರ್ಚಿಗೆ ಹಣ ಒದಗಿಸುತ್ತದೆ.

ಈ ಬುರ್ರಕಥೆಯಲ್ಲಿ ಒಟ್ಟು ೬೪ಕ್ಕೂ ಹೆಚ್ಚು ಮಹಾಕಾವ್ಯಗಳು, ೩೪ಕ್ಕೂ ಹೆಚ್ಚು ಸಣ್ಣ ಕಥೆಗಳು ಈ ಪ್ರಕಾರದಲ್ಲಿ ಸಿಗುತ್ತವೆ. ಅವುಗಳಲ್ಲಿ ಪ್ರಮುಖ ಕಾವ್ಯಗಳೆಂದರೆ, ಬಾಲನಾಗಮ್ಮನ ಕಥೆ, ಲಕ್ಷ್ಮಮ್ಮನ ಕಥೆ, ಕೃಷ್ಣ ಗೊಲ್ಲರ ಗಾಂಧಾರಿ ಕಥೆ, ಮಹಾರಾಜನ ಕಥೆ, ಹರಿಶ್ಚಂದ್ರನ ಕಥೆ ಗಿಣಿರಾಮನ ಕಥೆ, ನೀಲಮ್ಮನ ಕಥೆ ಈ ಎಲ್ಲಾ ಮಹಾಕಾವ್ಯಗಳನ್ನು ಕಥಾ ರೂಪದಲ್ಲಿ ಮಹಿಳೆಯರು ಮತ್ತು ಪುರುಷರು ಕೂಡಿ ಹಾಡುತ್ತಾರೆ. ಇತ್ತೀಚಿಗೆ ದಾಖಲಿಸುವ ಈ ಸಾಹಿತ್ಯ ಪ್ರಸಿದ್ಧವಾಗಿದೆ ಎಂದರೆ ೫೦ ವರ್ಷಗಳ ಹಿಂದೆ ಈ ಕಾವ್ಯ ಗಾಯನಗಳಿಗೆ ಮುಖ್ಯವಾಹಿನಿ ಅವಕಾಶ ಕೊಟ್ಟಿದ್ದರೆ ದೇಶದ, ನಾಡಿನ ಖ್ಯಾತ ಸಾಹಿತಿಗಳಾದ ವಿಶ್ವಮಾನವ, ಕುವೆಂಪು, ದ.ರಾ. ಬೇಂದ್ರೆ ಅವರು ಲಿಖಿತ ಸಾಹಿತ್ಯ ಜನಮನ್ನಣೆ ಗಳಿಸಿದಂತೆ ಈ ಬುರ್ರಕಥೆ ಜನಪದ ಸಾಹಿತ್ಯ ಅಥವಾ ಕಲಾವಿದರನ್ನು ಸಮಾಜ ಮತ್ತು ಸರಕಾರ ಮನ್ನಣೆ ನೀಡಿಲ್ಲ. ಇದು ಕಲಾವಿದರು ತಮ್ಮ ವೃತ್ತಿಯನ್ನು ಬಿಟ್ಟು ಪರ್ಯಾಯ ವೃತ್ತಿಗಳ ಕಡೆ ವಲಸೆ ಹೋಗುತ್ತಿದ್ದಾರೆ. ಇದರಿಂದ ಈ ಜನಪದ ಸಾಹಿತ್ಯ ಸಂಪತ್ತು ನಶಿಸುತ್ತದೆ. (ಬುಡ್ಗ ಜಂಗಮ, ಬಾಲಗುರುಮೂರ್ತಿ, ಪ್ರತಾಪ ಆರ್. ಬಹುರೂಪಿ, ಮುದ್ರಣ ೨೦೦೮, ಪುಟ ಸಂಖ್ಯೆ ೮೯)

ಬುರ್ರಕಥೆಗಳು, ಒಗಟುಗಳು, ಗಾದೆಮಾತುಗಳಲ್ಲಿ ಅಪಾರ ಜನಪದೀಯ ಸತ್ವವಿದ್ದು, ವಿನಾಶದ ಅಂಚಿಗೆ ತಲುಪಿರುವ ಈ ಕಲೆಯನ್ನು ರಕ್ಷಿಸುವ ಕಾರ್ಯ ತುರ್ತಾಗಿ ನಡೆಯಬೇಕಿದೆ.

### ೫. ಸರ್ಕಾರದ ಮುಂದೆ ಇಟ್ಟಿರುವ ಬೇಡಿಕೆವಾರು ವಿವರ

| ಕ್ರಸಂ | ವಿವರಣೆ | ಮಾಹಿತಿದಾರರು | ಪ್ರತಿಶತ |
|---|---|---|---|
| ೧. | ಹೌದು | ೪೦ | ೮೦ |
| ೨. | ಇಲ್ಲ | ೧೦ | ೨೦ |
| ೩. | ಒಟು | ೫೦ | ೧೦೦ |

ಮೇಲಿನ ಕೋಷ್ಟಕದಿಂದ ತಿಳಿದಿರುವುದೆನೆಂದರೆ, ಬುಡ್ಗ ಜಂಗಮ ಸಮುದಾಯದ ಒಟ್ಟು ೫೦ ಮಾಹಿತಿದಾರರನ್ನು ಸಂದರ್ಶಿಸಿದಾಗ ಅದರಲ್ಲಿ ೪೦ರಷ್ಟು ಮಾಹಿತಿದಾರರು ಸರ್ಕಾರದ ಮುಂದೆ ತಮ್ಮ ಬೇಡಿಕೆಗಳನ್ನು ಇಟ್ಟಿದ್ದರೆಂದು ಕಂಡುಬರುತ್ತದೆ. ಅವುಗಳೆಂದರೆ ಆಶ್ರಯ ಮನೆಗಳು, ಮಾಶಾಸನ, ಬ್ಯಾಂಕ್‌ಗಳಲ್ಲಿ ಸಾಲ ಸೌಲಭ್ಯಗಳು ದೊರೆಯುವಂತೆ, ಭೂಮಿಯನ್ನು

ನೀಡುವ ಕುರಿತು, ಇವರ ಬೇಡಿಕೆಯಾಗಿದೆ. ೧೦ರಷ್ಟು ಮಾಹಿತಿದಾರರು ಸರ್ಕಾರದ ಮುಂದೆ ಯಾವುದೇ ಬೇಡಿಕೆಯನ್ನು ಇಟ್ಟಿಲ್ಲ. ಏಕೆಂದರೆ ಇವರು ಶಿಕ್ಷಣದಿಂದ ವಂಚಿತರಾಗಿದ್ದು, ಮೂಢನಂಬಿಕೆಯನ್ನು ತಮ್ಮ ಜೀವನದಲ್ಲಿ ಇನ್ನು ಅಳವಡಿಸಿಕೊಂಡಿದ್ದು, ಸರ್ಕಾರದ ಯಾವುದೆ ಸೌಲಭ್ಯಗಳನ್ನು ಪಡೆಯಲು ಇಚ್ಚಿಸುವುದಿಲ್ಲವೆಂದು ತಿಳಿದುಬರುತ್ತದೆ. ಕೆಳಗಿನ ರೇಖಾಚಿತ್ರದಿಂದ ೮೦ರಷ್ಟು ಜನ ಸರ್ಕಾರದ ಮುಂದೆ ತಮ್ಮ ಬೇಡಿಕೆಯನ್ನು ಇಟ್ಟಿದ್ದಾರೆ. ೨೦ರಷ್ಟು ಜನ ಸರ್ಕಾರದ ಮುಂದೆ ತಮ್ಮ ಯಾವುದೇ ಬೇಡಿಕೆಯಲ್ಲಿ ಇಟ್ಟಿಲ್ಲವೆಂದು ತಿಳಿದುಬರುತ್ತದೆ.

**ಲಂಬ ಚಿತ್ರ ೪.೩. ಸರ್ಕಾರದ ಮುಂದೆ ಇಟ್ಟಿರುವ ಬೇಡಿಕೆವಾರು ಪ್ರಮಾಣ**




**ನಕ್ಷೆಯ ವಿವರ**

ಮೇಲಿನ ನಕ್ಷೆಯ ಮೂಲಕ ತಿಳಿದಿರುವುದೆನೆಂದರೆ, ಒಟ್ಟು ೫೦ ಮಹಿತಿದಾರರನ್ನು ಸಂದರ್ಶಿಸಿದಾಗ ಅದರಲ್ಲಿ ೪೦ರಷ್ಟು ಮಾಹಿತಿದಾರರು ಸರ್ಕಾರದ ಮುಂದೆ ತಮ್ಮ ಬೇಡಿಕೆಗಳನ್ನು ಇಟ್ಟಿದ್ದಾರೆಂದು ಕಂಡು ಬರುತ್ತದೆ. ೧೦ರಷ್ಟು ಮಾಹಿತಿದಾರರು ಸರ್ಕಾರದ ಮುಂದೆ ಯಾವುದೇ ಬೇಡಿಕೆಗಳನ್ನು ಇಟ್ಟಿಲ್ಲವೆಂದು ಹೇಳುತ್ತಾರೆಂದು ಕೋಷ್ಟಕದಿಂದ ತಿಳಿದು ಬರುತ್ತದೆ. ರೇಖಾ ಚಿತ್ರದಿಂದಾಗಿ ೮೦ರಷ್ಟು ಜನ ಸರ್ಕಾರದ ಮುಂದೆ ತಮ್ಮ ಬೇಡಿಕೆಗಳನ್ನು ಇಟ್ಟಿರುತ್ತಾರೆ, ಆದರೆ ೨೦ರಷ್ಟು ಜನರು ಯಾವುದೇ ಸರ್ಕಾರದ ಮುಂದೆ ಬೇಡಿಕೆಗಳನ್ನು ಇಟ್ಟಿರುವುದಿಲ್ಲವೆಂದು ತಿಳಿದುಬರುತ್ತದೆ.

**೬. ಶೈಕ್ಷಣಿಕವಾರು ವಿವರ.**

| ಕ್ರಸಂ | ವಿವರಣೆ | ಮಾಹಿತಿದಾರರು | ಪ್ರತಿಶತ |
|---|---|---|---|
| ೧ | ಅಕ್ಷರಸ್ಥರು | ೪೦ | ೮೦ |
| ೨ | ಅನಕ್ಷರಸ್ಥರು | ೧೦ | ೨೦ |
| ೩ | ಒಟ್ಟು | ೫೦ | ೧೦೦ |

ಈ ಮೇಲಿನ ಕೋಷ್ಟಕದಿಂದ ತಿಳಿದಿರುವುದೆನಂದರೆ ಸಮುದಾಯದ ೫೦ ಜನ ಮಾಹತಿದಾರರನ್ನು ಸಂದರ್ಶಿಸಿದಾಗ ಅದರಲ್ಲಿ ೪೦ರಷ್ಟು ಅಕ್ಷರಸ್ಥರಾಗಿದ್ದು, ಇವರು ಯುವಕರು, ವಯೋವೃದ್ಧರು, ಮಕ್ಕಳು ಆಗಿದ್ದಾರೆ. ೧೦ರಷ್ಟು ಅನಕ್ಷರಸ್ಥರು ಇದ್ದರೆಂದು ತಿಳಿದುಬರುತ್ತದೆ. ಅವರುಗಳೆಂದರೆ ವೃದ್ಧರು, ಮಹಿಳೆಯರು ಎಂದು ತಿಳಿಯಲಾಗಿದೆ.

**ಲಂಬ ಚಿತ್ರ ೪.೫. ಶೈಕ್ಷಣಿಕವಾರು ಸರಾಸರಿ**




**ನಕ್ಷೆಯ ವಿವರ**

ಈ ಮೇಲಿನ ನಕ್ಷೆಯಿಂದ ತಿಳಿದಿರುವುದೆನಂದರೆ ೫೦ ಮಾಹಿತಿದಾರರನ್ನು ಸಂದರ್ಶಿಸಿದಾಗ ಅದರಲ್ಲಿ ೪೦ ರಷ್ಟು ಅಕ್ಷರಸ್ಥರಾಗಿದ್ದು, ೧೦ರಷ್ಟು ಅನಕ್ಷರಸ್ಥರಾಗಿದ್ದಾರೆ ಎಂದು ತಿಳಿದು ಬರುತ್ತದೆ. ರೇಖಾ ಚಿತ್ರದಿಂದ ಹೇಳುವುದಾದರೆ ಶೇಕಡಾ ೮೦ರಷ್ಟು ಅಕ್ಷರಸ್ಥರಿದ್ದು, ೨೦ರಷ್ಟು ಅನಕ್ಷರಸ್ಥರು ಇದ್ದಾರೆಂದು ಕಂಡುಬರುತ್ತದೆ.

**೭. ಉದ್ಯೋಗದಲ್ಲಿ ತೊಡಗಿರುವವರ ವಿವರ**

| ಕ್ರಸಂ | ವಿವರಣೆ | ಮಾಹಿತಿದಾರರು | ಪ್ರತಿಶತ |
|---|---|---|---|
| ೧ | ಹೌದು | ೩೦ | ೬೦ |
| ೨ | ಇಲ್ಲ | ೨೦ | ೪೦ |
| ೩ | ಒಟ್ಟು | ೫೦ | ೧೦೦ |

ಈ ಮೇಲಿನ ಕೋಷ್ಟಕದ ಮೂಲಕ ತಿಳಿದು ಬರುವುದೇನೆಂದರೆ ಸಮುದಾಯದ ಒಟ್ಟು ೫೦ ಮಾಹಿತಿದಾರರನ್ನು ಪ್ರದರ್ಶಿಸಿದಾಗ ೧೫ರಷ್ಟು ಜನ ಭೂಮಿಯನ್ನು ಹೊಂದಿದ್ದಾರೆ. ಆದ್ದರಿಂದ ಇವರು ಕೃಷಿಯಲ್ಲಿ ತೊಡಗಿರುವುದನ್ನು ಕಾಣಲಾಗಿದೆ. ೩೫ರಷ್ಟು ಮಾಹಿತಿದಾರರು ಭೂಮಿಯನ್ನು ಹೊಂದಿರುವುದಿಲ್ಲ. ಆದ್ದರಿಂದ ಇರುವ ಸಣ್ಣ ಪುಟ್ಟ ವಸ್ತುಗಳ ಮಾರಾಟ ಪ್ರಕ್ರಿಯೆಯಲ್ಲಿ ತೊಡಗಿಸುವುದನ್ನು ಕಾಣಲಾಗಿದೆ. ರೇಖಾಚಿತ್ರದಿಂದ ತಿಳಿಯುವುದೇನೆಂದರೆ ಶೇ. ೩೦ರಷ್ಟು ಭೂಮಿಯನ್ನು ಹೊಂದಿರುತ್ತಾರೆ. ೭೦ರಷ್ಟು ಭೂಮಿಯನ್ನು ಹೊಂದಿರುವುದಿಲ್ಲವೆಂದು ತಿಳಿದುಬರುತ್ತದೆ. ಕೃಷಿ ಮತ್ತು ವ್ಯಾಪಾರಗಳಲ್ಲಿ ತೊಡಗಿರುವುದನ್ನು ಕಾಣಲಾಗಿದೆ.

**ವೃತ್ತ ಚಿತ್ರ ೪.೫. ಉದ್ಯೋಗದಲ್ಲಿ ತೊಡಗಿರುವವರ ವಿವರ**




ಈ ಮೇಲಿನ ನಕ್ಷೆಯಿಂದ ತಿಳಿದುಬರುವುದೆನೆಂದರೆ, ಒಟ್ಟು ೫೦ ಮಾಹಿತಿದಾರರನ್ನು ಸಂದರ್ಶಿಸಿದಾಗ ಅದರಲ್ಲಿ ೧೫ರಷ್ಟು ಜನ ಭೂಮಿಯನ್ನು ಹೊಂದಿದ್ದಾರೆ, ೩೫ರಷ್ಟು ಮಾಹಿತಿದಾರರು ಭೂಮಿಯನ್ನು ಹೊಂದಿರುವುದಿಲ್ಲ. ರೇಖಾಚಿತ್ರದಿಂದ ತಿಳಿದಿರುವುದೆನೆಂದರೆ ಶೇಕಡಾ ೩೦ರಷ್ಟು ಭೂಮಿಯನ್ನು ಹೊಂದಿರುತ್ತಾರೆ, ೭೦ರಷ್ಟು ಭೂಮಿಯನ್ನು ಹೊಂದಿರುವುದಿಲ್ಲವೆಂದು ಕಂಡುಬರುತ್ತದೆ.

## ೪.೩. ಇತ್ಯಾದಿ

ಸರ್ಕಾರಿ ಲೆಕ್ಕದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ್ದರೂ ಯಾವ ಇಲಾಖೆಯು ಇವರ ಬಗ್ಗೆ ತಲೆಕೆಡಿಸಿಕೊಂಡಿಲ್ಲ. ವ್ಯಾಪಾರಕ್ಕೆ ಸಾಲ ಕೇಳಿದರೆ ಬ್ಯಾಂಕಿನವರು ಜಮೀನು ಕೇಳುತ್ತಾರೆ. ಅಲೆಮಾರಿಗಳಾದ ಕಾರಣ ಇವರು ತಮ್ಮ ಮೂಲ ವೃತ್ತಿಯನ್ನು ತ್ಯಜಿಸಿ ಇತ್ತೀಚಿನ ದಿನಗಳಲ್ಲಿ ಮೂಲಸೌಕರ್ಯಗಳನ್ನು ಹೊಂದುವ ಆಸೆಯಿಂದ ವಿವಿಧ ವೃತ್ತಿಗಳಿಗೆ ವಲಸೆ ಹೋಗುವ ಸಂದರ್ಭವನ್ನು ಕಾಣಲಾಗುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ಈ ಜನಸಮುದಾಯವು ಕೃಷಿ, ಕೈಗಾರಿಕೆಯಲ್ಲಿ ಸಣ್ಣ ಮತ್ತು ಗೃಹ ಕೈಗಾರಿಕೆಯಲ್ಲಿ ಕೆಲಸ ಮಾಡುವುದನ್ನು ಕಾಣಲಾಗಿದೆ. ವ್ಯಾಪಾರಕ್ಕಾಗಿ ಊರೂರು ಅಲೆದು ಕಾಶಾರಿಕೆ ವೃತ್ತಿಯಲ್ಲಿ ತೊಡಗಿರುವುದನ್ನು ಕಾಣಲಾಗುತ್ತದೆ. ಬಂದ ಹಣದಲ್ಲಿ ಈ ಜನರು ಜೀವನವನ್ನು ನಡೆಸುತ್ತಾರೆ ಎಂದು ತಿಳಿಯಲಾಗಿದೆ.

## ಅಡಿ ಟಿಪ್ಪಣಿಗಳು

೧. ವೆಂಕನಗೌಡ, ೨೦೦೨, ಬಳ್ಳಾರಿ ಮತ್ತು ಆಂಧ್ರ ಪ್ರದೇಶದ ಗಡಿ ಭಾಗದ ಹಗಲುವೇಷಗಾರರು ಒಂದು ಅಧ್ಯಯನ, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗ.

೨. ಮಾಹಿತಿ ಪ್ರಜಾವಾಣಿ (೧೮-೦೩-೨೦೦೩)

೩. ಬಾಲಗುರುಮೂರ್ತಿ, ಪ್ರತಾಪ ಆರ್. ಬಹುರೂಪಿ, ೨೦೦೮, ಬುಡ್ಗ ಜಂಗಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೪. ಸಾರಿಕದೇವಿ, ೨೦೦೬, ಬುರ್‍ರಕಥೆ ಈರಮ್ಮ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗ.



## ಅಧ್ಯಾಯ : ಐದು

# ಪ್ರಸ್ತುತ ಸಂದರ್ಭದಲ್ಲಿ ಬುಡ್ಗ ಜಂಗಮರ ಆರ್ಥಿಕ ಸಮಸ್ಯೆ/ಸಲಹೆಗಳು

೫.೧. ಕಲಾ ಪೋಷಣೆಯ ಕೊರತೆ

೫.೨. ಪಾರಂಪರಿಕ ವೃತ್ತಿ ಪಲ್ಲಟ

೫.೩. ಸರಕಾರದ ಯೋಜನೆಗಳು

ಅಧ್ಯಾಯ: ಐದು

# ಪ್ರಸ್ತುತ ಸಂದರ್ಭದಲ್ಲಿ ಬುಡ್ಗ ಜಂಗಮರ ಆರ್ಥಿಕ ಸಮಸ್ಯೆ/ಸಲಹೆಗಳು

## ೫.೧. ಕಲಾ ಪೋಷಣೆಯ ಕೊರತೆ

"ಬುಡ್ಗ ಜಂಗಮರಿಗೆ ಕಲೆ ಎನ್ನುವುದು ವಂಶ ಪಾರಂಪರ್ಯದಿಂದ ಬಂದದ್ದು. ಅನೇಕ ತಲೆಮಾರುಗಳಿಂದ, ಕಾಲಾನುಕಾಲದಿಂದ ಇವರು ಬುರ್ರಕಥೆಗಾರರಾಗಿ, ವೇಷಗಾರರಾಗಿ, ಬಹುರೂಪಿಗಳಾಗಿ, ಬಾಳಸಂತರಾಗಿ, ಬೈರಾಗಿಗಳಾಗಿ, ಕುರುಕುರು ಮಾಮಗಳಾಗಿ, ಅನೇಕ ಕಲೆಗಳನ್ನು ಅವಲಂಬಿಸಿಯೇ ಬದುಕು ಸಾಗಿಸುತ್ತಿದ್ದಾರೆ. ಇವರು ಪ್ರದರ್ಶಿಸುವ ಕಲೆಗಳನ್ನು ಎರಡು ಭಾಗಗಳನ್ನಾಗಿ ವಿಂಗಡಿಸಬಹುದು.

೧. ಏಕವ್ಯಕ್ತಿ ಪ್ರದರ್ಶನ ಕಲೆ

೨. ಸಾಮೂಹಿಕ ಪ್ರದರ್ಶನ ಕಲೆ

### ೧. ಏಕವ್ಯಕ್ತಿ ಪದರ್ಶನ ಕಲೆ

ಕಲಾ ಪ್ರದರ್ಶನದಲ್ಲಿ ಒಬ್ಬ ವ್ಯಕ್ತಿಯಿಂದ ಪ್ರದರ್ಶನಗೊಳ್ಳುವ ಕಲೆಯನ್ನು ಏಕವ್ಯಕ್ತಿ ಪ್ರದರ್ಶನ ವ್ಯಕ್ತಿ ಪ್ರದರ್ಶನ ಕಲೆ ಎನ್ನುವರು. ಉದಾ. ತುಪಾಕಿ ರಾಮನ ವೇಷ, ಬ್ರಾಹ್ಮಣ ವಿಧವಾ ವೇಷ, ಬಾಳಸಂತರ ವೇಷ, ವೀರ ಬಾಹುವೇಷ, ಪಕೀರ ಸಾಬವೇಷ, ಕೋಯಪಂತು (ವೇಷ), ಮುತ್ತಡಿ ಪಂತು (ವೇಷ) ಎಕತಾರ ಪಂತ (ವೇಷ), ಜೊತೆಗೆ ಕಪ್ಪೇರ ಪಂತು (ವೇಷ), ಜಂಗಮರ ವೇಷ ಬ್ರಾಹ್ಮಣರ ವೇಷ ಮುಂತಾದವುಗಳು ಏಕವ್ಯಕ್ತಿ ಪ್ರದರ್ಶನ ಕಲೆಗಳಾಗಿವೆ.

ಏಕವ್ಯಕ್ತಿ ಪ್ರದರ್ಶನ ಕಲೆಗಳಲ್ಲಿ ಹಾಸ್ಯ, ವಿಡಂಬನೆ, ವಿನೋದ ಮತ್ತು ಸಾಮಾಜಿಕ ಪ್ರಜ್ಞೆ ಚಾತುರ್ವರ್ಣ ವ್ಯವಸ್ಥೆಯ ವಿಡಂಬನೆ, ಮುಖ್ಯವಾಗಿ ಎದ್ದು ಕಾಣುತ್ತದೆ. ತುಪಾಕಿ ರಾಮನ ವೇಷ, ಇಂಗ್ಲೀಷರ ದಬ್ಬಾಳಿಕೆ ನಿಜಾಂಶಾಹಿಯ ದಬ್ಬಾಳಿಕೆಯನ್ನು ಜನರು ಹೇಗೆ ಎದುರಿಸಬೇಕು ಎನ್ನುವುದಕ್ಕೆ ಹಾಕಿದ ವೇಷ. ಆ ಕಾಲದಲ್ಲಿ ಹಳ್ಳಿಗೆ ಒಬ್ಬ ಪೊಲೀಸ ಬಂದಾಗ ಊರೆಲ್ಲ

ಗಡಗಡ ನಡುಗುತ್ತಿತ್ತಂತೆ. ಆ ಭಯ ನಿವಾರಣೆಗಾಗಿ ತುಪಾಕಿ ರಾಮನ ವೇಷ ಹಾಕುತ್ತಿದ್ದರು ಎಂದು ವೇಷಗಾರರು ಹೇಳುತ್ತಾರೆ. ಈ ವೇಷದ ಮುಖ್ಯ ಉದ್ದೇಶ ಜನ ಪೊಲೀಸರಿಗೆ ಅಂಜಬಾರದು. ಬ್ರಾಹ್ಮಣ ವಿಧವಾ ವೇಷ ಸಮಾಜದ ವಿಧವಾ ಸ್ತ್ರೀಯರ ನೋವನ್ನು ಚಿತ್ರಿಸುವಂತಹದ್ದು. ಅದು ಉಚ್ಚವರ್ಗದ ಬ್ರಾಹ್ಮಣ ವಿಧವಾ ಸ್ತ್ರೀಯ ಬದುಕಿನ ದುರಂತತೆಯನ್ನು ಚಿತ್ರಿಸುವುದು ಇದರ ಮುಖ್ಯ ಉದ್ದೇಶವಾಗಿದೆ. ಈ ಬ್ರಾಹ್ಮಣ ವಿಧವಾ ವೇಷವನ್ನು ಬುಡ್ಗ ಜಂಗಮರು 'ಬೋಳಿ ಬ್ರಾಹ್ಮಣಮ್ಮನ ವೇಷ'ವೆಂತಲೂ ಕರೆದಿದ್ದಾರೆ. ಅದರಂತೆ ಕೋಯ ಪಂತ ಇವರು ಜನಪದ ವೈದ್ಯರು, ವೇಷ ಹಾಕಿಕೊಂಡು ಭವಿಷ್ಯ ಹೇಳುತ್ತಾ ರೋಗ ರುಜಿನಗಳಿಗೆ ಔಷಧಿ ಕೊಡುವರು. ಕಣಿ ಹೇಳುವರು. ಏಕವ್ಯಕ್ತಿ ಪ್ರದರ್ಶನದಲ್ಲಿ ಕಂಡುಬರುತ್ತಾರೆ. ವೀರಬಾಹು ವೇಷದಲ್ಲಿ ಚಾತುರ್ವರ್ಣ ವ್ಯವಸ್ಥೆಯ ವಿಡಂಬನೆಯಿದೆ. ಹೀಗೆ ಏಕವ್ಯಕ್ತಿ ಪ್ರದರ್ಶನ ಕಲೆ ಸಾಮಾಜಿಕ ಜಾಗೃತಿಗಾಗಿ ಇರುವುದನ್ನು ಕಾಣುತ್ತೇವೆ.

**೨. ಸಾಮೂಹಿಕ ಪ್ರದರ್ಶನ ಕಲೆ**

ಕಲಾ ಪ್ರದರ್ಶನದಲ್ಲಿ ಒಬ್ಬನಿಗಿಂತ ಹೆಚ್ಚು ಜನರಿಂದ ಪ್ರದರ್ಶನಗೊಳ್ಳುವ ಕಲೆಯನ್ನು ಸಾಮೂಹಿಕ ಪ್ರದರ್ಶನ ಕಲೆಗಳೆಂದು ಕರೆಯುತ್ತಾರೆ. ಬುರ್ರಕಥೆ, ಹಗಲು ವೇಷ, ತೊಗಲು ಗೊಂಬೆಯಾಟ, ಬೀದಿ ಭಾಗವತ, ಕಾಡು ಪಾಪ, ಗುರಪ್ಪ ವೇಷ, ಪಂತು, ಹರಿಕಥೆ, ಕೊಜ್ಜಾಬಾಲ್ಕಲು, ಮುಂದಚ್ಚು ವೇಷ ಮುಂತಾದವುಗಳು ಸಾಮೂಹಿಕ ಪ್ರದರ್ಶನ ಕಲೆಗಳಾಗಿವೆ.

ಇವುಗಳಲ್ಲಿ ಬುರ್ರಕಥೆ, ಹಗಲು ವೇಷ, ತೊಗಲು ಗೊಂಬೆಯಾಟ, ಬೀದಿಯಾಟ, ಬೀದಿ ಭಾಗವತ ಮುಂತಾದ ಕಲೆಗಳು ವಿಶಿಷ್ಟವಾಗಿ ಕಂಡುಬರುತ್ತವೆ. ಸಾಮಾಜಿಕ, ಐತಿಹಾಸಿಕ ಮತ್ತು ಪೌರಾಣಿಕ ಅಂಶಗಳ ಹಿನ್ನೆಲೆಯಲ್ಲಿ ಇವು ಅತ್ಯಂತ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ.

**ಹಗಲು ವೇಷ:** ಹಗಲಿನಲ್ಲಿ ವೇಷ ಧರಿಸಿ ತಿರುಗುವುದರಿಂದ ಹಗಲುವೇಷಗಾರರು ಎನ್ನುವರು. ಬುರ್ರಕಥೆಯಂತೆ ಈ ಕಲೆಯೂ ಅತ್ಯಂತ ಜನಪ್ರಿಯತೆ ಪಡೆದಿದೆ. ಆಂಧ್ರ, ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರ, ಗುಜರಾತ, ರಾಜಸ್ಥಾನ ಮುಂತಾದ ರಾಜ್ಯಗಳಲ್ಲಿಯೂ ಹಗಲುವೇಷ ಕಲೆ ಕಂಡುಬರುತ್ತದೆ. ಆಂಧ್ರದಲ್ಲಿ ಇವರನ್ನು ಪಗಟೆ ವೇಷಾಲು, ತಮಿಳಿನಲ್ಲಿ ಪಗಲ್ ವೇಷಂ, ಕರ್ನಾಟಕದಲ್ಲಿ ಬಹುರೂಪಿಗಳು, ಹಗಲು ವೇಷದವರು, ಪಾತ್ರದವರು, ಜಾತಿಗಾರರು, ಮಹಾರಾಷ್ಟ್ರದಲ್ಲಿ ಸೋಂಗಾಡಿ, ರಾಜಸ್ಥಾನ, ಗುಜರಾತ ಮುಂತಾದ ರಾಜ್ಯಗಳಲ್ಲಿ ಬುಡ್ಗ ಜಂಗಮರು ಎನ್ನುವ ಹೆಸರಿನಿಂದ ಕರೆಯುತ್ತಾರೆ." (ಬುರ್ರಕಥಾ ಈರಮ್ಮ: ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಪು. ೩೧)

"ಹಗಲಿನ ವೇಳೆಯಲ್ಲಿ ವೇಷ ಹಾಕಿಕೊಂಡು ರಾಮಾಯಣ, ಮಹಾಭಾರತದ ವೇಷಗಳನ್ನು ಮತ್ತು ಸಾಮಾಜಿಕ ವೇಷಗಳನ್ನು ಹಾಕಿಕೊಂಡು ಊರಿನ ಮಧ್ಯೆ ಮತ್ತು ಊರಿನ ಪ್ರತಿಯೊಂದು ಮನೆಯ ಮುಂದೆ ಹೋಗಿ ದಿನಕ್ಕೊಂದು ವೇಷ ಹಾಕಿ ಬೀದಿ ನಾಟಕ ಪ್ರದರ್ಶನ ಮಾಡುತ್ತಾರೆ.

ವೇಷ ಹಾಕಿ ಊರ ಗೌಡ, ದೇಸಾಯಿ, ಇಲ್ಲದೆ ಪ್ರಮುಖರ ಮನೆಗೆ ತೆರಳಿ ಶರಣ ತತ್ವ ಪದಗಳನ್ನು ಮತ್ತು ಸರ್ವಜ್ಞನ ವಚನಗಳನ್ನು ಹಾಡಿ ಕಾಡಿ ಬೇಡಿ ರೊಕ್ಕ ರೂಪಾಯಿ, ದವಸ ಧಾನ್ಯ, ಬಟ್ಟೆ, ಧನ, ಕುರಿ, ಕೋಳಿಗಳನ್ನು ದಾನವಾಗಿ ಪಡೆದು ಭಿಕ್ಷಾಟನೆ ಮಾಡುತ್ತಾರೆ." (ಬುಡ್ಗ ಜಂಗಮ– ಬಾಲಗುರುಮೂರ್ತಿ, ಪ್ರತಾಪ ಆರ್. ಬಹುರೂಪಿ, ೨೦೦೮, ಪುಟ ಸಂಖ್ಯೆ ೭೧)

"**ಬೀದಿ ಭಾಗವತ:** ಇದನ್ನು ಯಕ್ಷಗಾನ ಎಂದು ಕರೆಯುವುದುಂಟು. ಈ ಬುಡ್ಗ ಜಂಗಮರ ಕಥೆಗಳು ಪೌರಾಣಿಕ ರೂಪದಲ್ಲಿ ವೇಷಭೂಷಣವನ್ನು ಧರಿಸಿ ವೇದಿಕೆಯ ಮೇಲೆ ಹಾಡುವುದಕ್ಕೆ ಬೀದಿ ಭಾಗವತಗಳೆಂದು ಕರೆಯುವುದುಂಟು. ಬೀದಿ ಭಾಗವತಗಳನ್ನು ೧೭ನೇ ಶತಮಾನದಲ್ಲಿ ಚಂದ್ರಶೇಖರ ಶತಕಂ ಇದರಲ್ಲಿ ವಿವರಣೆ ನೀಡಿದ್ದಾರೆ. ಈ ಬೀದಿ ಭಾಗವತದಲ್ಲಿ ನಾಗಿ ಗಂಗಿ ಎಂಬ ಸ್ತ್ರೀ ಪಾತ್ರ ಪ್ರಾರಂಭಿಸುತ್ತಾರೆ. ಈ ಬೀದಿ ಭಾಗವತಗಳನ್ನು ಪ್ರದರ್ಶಿಸುತ್ತಾರೆ. ಆದರೆ ಇದರಲ್ಲಿ ಸ್ತ್ರೀ ಪಾತ್ರಕ್ಕೆ ಪುರುಷರನ್ನು ನೇಮಿಸುತ್ತಾರೆ. ಬೀದಿ ಭಾಗವತಗಳು ಚನ್ನದಾಸರು, ಚಂಚರು, ಯಾನದವರು, ಎರೆಗೊಲ್ಲರು ಪ್ರದರ್ಶಿಸುತ್ತಾರೆಂದು ತಿಳಿದುಬರುತ್ತದೆ.

ಪೂರ್ವ ಕಾಲದಲ್ಲಿ ಬೀದಿ ಭಾಗವತಗಳನ್ನು ಹರಿಶ್ಚಂದ್ರ ಪಾರಂಪರಿಕ ಮೈರಾವಣ ಚರಿತ್ರೆ, ಶತಕಂಠ ರಾಮಾಯಣ, ಕೋಟಾಪುರಿ ಧರ್ಮಚರಿತ್ರೆ, ಹೇಮಾಲಪಲ್ಲಿ ವಿರಾರಪಲ್ಲಿ ಹೇಮದಲ್ಲಿ ಗರುಡ ಅಲ್ಲದೆ, ಚಂದ್ರಹಾಸ ಪ್ರದಲ್ಯದ ಚರಿತ್ರೆ, ಪ್ರಭಾವವಿಲಾಸ, ಸುಗ್ರೀವ ವಿಲಾಸಂ, ಶುಂಭಕಾಸುರ ವಧ, ಬಾಣಸುರ ಇದು ಕೇವಲ ಬುಡ್ಗ ಜಂಗಮರು ತಂಬೂರಿ ಬುಡಿಗೆ ಹಿಡಿದು ಬುರ್ರ ಕಥೆ ಹೇಳುವ ಬದಲಿಗೆ ಪೌರಾಣಿಕವಾಗಿ ವೇಷ ಧರಿಸಿ ಇದೇ ಕತೆಗಳನ್ನು ತೆರೆಯ ಮೇಲೆ ಪ್ರದರ್ಶಿಸುವುದು ಒಂದು ಕಲೆ.

ಮೊದಲಿಗೆ ರಾಮಕೃಷ್ಣನ ವೇಷ ಪ್ರವೇಶ ಮಾಡಿ ನಂತರ ಸೂತ್ರಧಾರನು ಹಾಸ್ಯ ವಿನೋದವನ್ನು ನೀಡುತ್ತಾ ರಂಗದಲ್ಲಿ ಪ್ರವೇಶ ಮಾಡುತ್ತಾನೆ. ಇದರ ಹಿನ್ನೆಲೆಗಾಯನ ಹಾಡು ತಕ್ಕಂತೆ ಇವರ ಯಕ್ಷಗಾನ ರೀತಿಯಲ್ಲಿ ಹಾಡುತ್ತಾ, ಕುಣಿಯುತ್ತಾ ನಡೆಯುವರು. ಇದು ಆಂಧ್ರಪ್ರದೇಶ ಮತ್ತು ದಕ್ಷಿಣ ಕರ್ನಾಟಕದ ಬೆಂಗಳೂರು, ಕೋಲಾರ ಪ್ರದೇಶಗಳಲ್ಲಿ ಈ ಬೀದಿ ಭಾಗವತಗಳನ್ನು ಪ್ರದರ್ಶಿಸುತ್ತಾರೆ.

ಇವರು ಬೀದಿ ಭಾಗವತದಲ್ಲಿ ಪ್ರದರ್ಶಿಸುವ ಕಥೆಗಳು ಗರುಡಾ ಚಲಂ, ಚಂಚುಲಕ್ಷ್ಮಿ, ದೇವಯಾನಿ, ರುಕ್ಮಿಣಿ ಕಲ್ಯಾಣ, ಬಾಣಾಸುರ ಭಸ್ಮಾಸುರ ಈ ಕಲೆಯಲ್ಲಿ ಬುಡ್ಗ ಜಂಗಮರು ಅಪ್ರತಿಮ ಕಲಾ ಪ್ರದರ್ಶನಗಳನ್ನು ಮಾಡಿದ್ದಾರೆ." (ಬುಡ್ಗ ಜಂಗಮ, ಬಾಲಗುರುಮೂರ್ತಿ, ಪ್ರತಾಪ ರಾ ಬಹುರೂಪ ಪುಟ ಸಂಖ್ಯೆ–೧೫೦)

"**ಬುರ್ರ ಕಥಾ:** ಬುರ‍್ರಕಥೆ ಕಲಾ ಪ್ರಕಾರದಲ್ಲೊಂದು. ಬುಡ್ಗ ಜಂಗಮರು ಇದರ ವಾರಸುದಾರರು. ತಾತ ಮುತ್ತಾತನಿಂದ ಬುರುಡೆಯಿಂದ ಸಾಂಪ್ರದಾಯಿಕವಾಗಿ ಬಂದಿರುವ ಒಟ್ಟು ೬೦ಕ್ಕೂ

ಹೆಚ್ಚು ಮಹಾ ಕಾವ್ಯಗಳು, ೩೦ಕ್ಕೂ ಹೆಚ್ಚು ಸಣ್ಣ ಕತೆಗಳು ಈ ಪ್ರಕಾರದಲ್ಲಿ ಸಿಗುತ್ತವೆ. ಅವುಗಳಲ್ಲಿ ಪ್ರಮುಖ ಕಾವ್ಯಗಳೆಂದರೆ, ಬಾಲನಾಗಮ್ಮನ ಕತೆ, ಲಕ್ಷ್ಮಮ್ಮನ ಕತೆ, ಕೃಷ್ಣ ಗೊಲ್ಲರ ಗಾಂಧಾರಿ ಕತೆ, ಮಹಾರಾಜನ ಕತೆ, ಅಮ್ಮರಾಜನ ಕತೆ, ಕುಮಾರರಾಮನ ಕತೆ, ಹರಿಶ್ಚಂದ್ರನ ಕತೆ, ಗೋಪಿರೆಡ್ಡಿ ಕತೆ, ಪಾಂಡವರ ವನವಾಸದ ಕತೆ, ಗಿಣಿರಾಮನ ಕತೆ, ರೇಣುಕ ಯಲ್ಲಮ್ಮನ ಕತೆ, ಪಾಪರಾಯನ ಕತೆ, ಗಂಗಿ ಗೌರಿಯರ ಕತೆ, ನೀಲಮ್ಮನ ಕತೆ ಈ ಎಲ್ಲಾ ಮಹಾಕಾವ್ಯಗಳನ್ನು ಕಥಾರೂಪದಲ್ಲಿ ಮಹಿಳೆಯರು ಮತ್ತು ಪುರುಷರು ಕೂಡಿ ತಂಬೂರಿ, ಗುಮ್ಮಟ (ಗುಮ್ಮಿಟಿ) ಗಗ್ಗರಿ, ಚಿಟಿಗೆ, ತಾಳ ಹಿಡಿದು ಊರಿನ ಪ್ರಮುಖ ರಸ್ತೆಯ ಮನೆಯ ಮುಂದೆ ನಿಂತು ಹಾಡುತ್ತಾ ತಂದಾನ ಕತೆಗಳನ್ನು ಹೇಳುತ್ತಾ ನರ್ತಿಸಿ ಕಲಾ ಪ್ರದರ್ಶನ ಮಾಡುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನದ ಡಾ.ಕೆ.ಎಂ. ಮೇತ್ರಿ ಅವರು ಬುಡ್ಗ ಜಂಗಮರ ಸುಪ್ರಸಿದ್ಧ ಕಲಾವಿದೆ ನಾಡೋಜ ಬುರ್ರಕಥಾ ಈರಮ್ಮ ಹಾಡಿರುವ ಯಲ್ಲಮ್ಮ ಕಥನಕಾವ್ಯ, ಕುಮಾರರಾಮನ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯಗಳನ್ನು ಮತ್ತು ಡಾ.ಸ.ಚಿ. ರಮೇಶ ಅವರು ಸ್ಯಾಸಿ ಚಿನ್ನಮ್ಮನ ಕಾವ್ಯವನ್ನು ಸಂಪಾದಿಸಿದ್ದಾರೆ. ಸಮುದಾಯದ ಸಾಹಿತ್ಯವನ್ನು ಅತ್ಯಂತ ಉತ್ಕರ್ಷವಾಗಿದೆ ಎಂದು ದಾಖಲಿಸಿದ್ದಾರೆ.

ಇತ್ತೀಚಿಗೆ ದಾಖಲಿಸಿರುವ ಈ ಸಾಹಿತ್ಯ ಇಷ್ಟೊಂದು ಪ್ರಸಿದ್ಧವಾಗಿದೆ ಇದರಲ್ಲಿ ಎಂತಹ ಸಾಹಿತ್ಯ ಇರಬಹುದೆಂದು ಊಹಿಸಬಹುದಾಗಿದೆ. ೫೦ ವರ್ಷಗಳ ಹಿಂದೆ ಈ ಕಾವ್ಯ ಗಾಯನಗಳಿಗೆ ಮುಖ್ಯವಾಹಿನಿ ಅವಕಾಶ ಕೊಟ್ಟಿದ್ದರೆ ದೇಶದ ನಾಡಿನ ಖ್ಯಾತ ಸಾಹಿತಿಗಳಾದ ವಿಶ್ವಮಾನವ, ಕುವೆಂಪು, ದ.ರಾ. ಬೇಂದ್ರೆ ಅವರು ಲಿಖಿತ ಸಾಹಿತ್ಯ ಜನಮನ್ನಣೆ ಗಳಿಸಿದಂತೆ ಬುರ್ರಕಥೆಯು ಜನಪದ ಸಾಹಿತ್ಯ ಅಥವಾ ಕಲಾವಿದರನ್ನು ಸಮಾಜ ಸರಕಾರ ಮನ್ನಣೆ ನೀಡಿಲ್ಲ. ಇಂದು ಈ ಪ್ರಕಾರ ಮತ್ತು ಕಲಾವಿದರು ತಮ್ಮ ಅಂತಸ್ತನ್ನು ಕಳೆದುಕೊಂಡು ಭಿಕ್ಷುಕರಂತೆ ಕಾಣುತ್ತಿದ್ದಾರೆ. ಕಲಾವಿದರು ಕಲಾಸಕ್ತಿಯನ್ನು ಕಳೆದುಕೊಂಡು ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿದ್ದಾರೆ. ಜನಪದ ಸಾಹಿತ್ಯ ಸಂಪತ್ತು ನಶಿಸುತ್ತದೆ." (ಬುಡ್ಗ ಜಂಗಮ, ಬಾಲಗುರುಮೂರ್ತಿ, ಪ್ರತಾಪ ರಾ ಬಹುರೂಪ ಪುಟ ಸಂಖ್ಯೆ-೮೮)

ಹಿಂದೆ ಜನರಲ್ಲಿ ಸ್ವಾತಂತ್ರ್ಯ ಕಿಚ್ಚು ಹಚ್ಚಲು ಬಳಕೆಯಾಗಿದ್ದ ಇವರ ಕಲೆ ಇದೀಗ ಭಿಕ್ಷಾಟನೆಗೆ ಬಳಕೆಯಾಗುತ್ತಿರುವುದು ವಿಷಾದನೀಯ. ಗಂಡಸರು ವೀರಾವೇಶದ ಕತೆ ಹೇಳಿದರೆ ಹೆಂಗಸರು ಹೊಟ್ಟೆ ಹೊರೆಯಲು ನೆರವಾಗುತ್ತಾರೆ. ಉಳಿದಂತೆ ಪ್ರಾಣಿ ಸಾಕಾಣಿಕೆ ಕೈ ಖರ್ಚಿಗೆ ಹಣ ಒದಗಿಸುತ್ತದೆ.

ಬುರ್ರ ಕಥೆಗಳು, ಒಗಟುಗಳು, ಗಾದೆಗಳಲ್ಲಿ ಅಪಾರ ಜಾನಪದೀಯ ಸತ್ವವಿದ್ದು ವಿನಾಶದ ಅಂಚಿಕೆ ತಲುಪಿರುವ ಈ ಕಲೆಯನ್ನು ರಕ್ಷಿಸುವ ಕಾರ್ಯ ತುರ್ತಾಗಿ ನಡೆಯಬೇಕಿದೆ. ಹಂಪಿ, ಆನೆಗೊಂದಿ, ಇಟಗಿ ಉತ್ಸವಗಳಲ್ಲೂ ಈ ಕಲಾವಿದರನ್ನು ನಿರ್ಲಕ್ಷಿಸಿರುವುದು ಖೇದದ ಸಂಗತಿ.

ಇನ್ನು ಮುಂದಾದರೂ ವಿಶ್ವವಿದ್ಯಾಲಯಗಳು ಇವರತ್ತ ಗಮನ ಹರಿಸಿ ಬುರ್ರ ಕಥೆಗಳನ್ನು ದಾಖಲಿಸಿ ಸಂರಕ್ಷಿಸುವ ಹಾಗೂ ಅವುಗಳನ್ನು ಜನಪ್ರಿಯಗೊಳಿಸುವ ಸಾರ್ಥಕ ಕೆಲಸ ನಡೆಯಬೇಕಿದೆ.

ಈ ಕಲೆಯು ನಶಿಸಿಹೋಗುತ್ತದೆ ಎಂಬ ಭಯದಲ್ಲಿ ಈ ಸಮುದಾಯದ ಜನರು ಇರುವುದನ್ನು ಕಾಣಲಾಗುತ್ತದೆ.

### ೫.೨. ಪಾರಂಪರಿಕ ವೃತ್ತಿ ಪಲ್ಲಟ

ಬುಡ್ಗ ಜಂಗಮ ಸಮುದಾಯದ ಕಲೆಯು ಪ್ರಸ್ತುತ ದಿನಮಾನಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಕಂಡುಬರುವುದನ್ನು ನೋಡಲಾಗಿದೆ. ಈ ಸಮುದಾಯದ ಜನರು ಅಲೆಮಾರಿಗಳಾಗಿದ್ದು ಈಗಿನ ಜಾಗತೀಕರಣ ವ್ಯವಸ್ಥೆಗೆ ಹೊಂದಿಕೊಳ್ಳುವುದು ಅನಿವಾರ್ಯ ಸಂಗತಿಯಾಗಿದೆ. ಆದ್ದರಿಂದ ಇವರು ಒಂದು ಕಡೆ ನೆಲೆ ನಿಲ್ಲಲು ಆಸಕ್ತಿಯನ್ನು ವಹಿಸುತ್ತಿದ್ದಾರೆ. ಸಮುದಾಯದ ವೃದ್ಧರು, ಮಧ್ಯಮ ವಯಸ್ಕರು, ಯುವಕರು ಕಲೆಯ ಬಗ್ಗೆ ಅಪಾರ ಗೌರವ ಮತ್ತು ನಂಬಿಕೆಯನ್ನು ಇಟ್ಟುಕೊಂಡವರು.

ಆದರೆ ಸಮಾಜದಲ್ಲಿ ಪ್ರಸ್ತುತ ದಿನಗಳಲ್ಲಿ ಇವರ ಕಲೆಗೆ ಬೆಲೆ ಇಲ್ಲದಂತಾಗಿದೆ. ಸಿನಿಮಾ ರಂಗ, ಮಾಧ್ಯಮಗಳಲ್ಲಿನ ಕಾರ್ಯಕ್ರಮಗಳಿಂದ ಈ ಸಮುದಾಯದ ಕಲೆಯನ್ನು ನೋಡುವ ಜನರ ಆಸಕ್ತಿಯು ಕಡಿಮೆಯಾಗಿದೆ. ಅಲ್ಲದೆ ಬುಡ್ಗ ಜಂಗಮ ಸಮುದಾಯದ ಜನರು ಅಭಿವೃದ್ಧಿಯ ಕಡೆಗೆ ತಮ್ಮ ಗಮನವನ್ನು ಹರಿಸಲು ತೊಡಗಿದ್ದಾರೆ. ಕಲೆ ಪ್ರದರ್ಶನದ ಮೂಲಕ ಕೇವಲ ದವಸ ಧಾನ್ಯಗಳನ್ನು, ಆಹಾರ, ಬಟ್ಟೆ, ಅಲ್ಪ ಸ್ವಲ್ಪ ಹಣಕಾಸು ಸಿಗಬಹುದು. ಇದರಿಂದ ಈ ಸಮುದಾಯದ ಜನರು ಜೀವಿಸಲು ಕಷ್ಟಕರವಾದ ಸಂಗತಿಯನ್ನು ಈ ದಿನಮಾನಗಳಲ್ಲಿ ನೋಡಲಾಗಿದೆ.

ಆದ್ದರಿಂದ ತಮ್ಮ ಕಲೆಯನ್ನು ಪ್ರದರ್ಶನ ಮಾಡುತ್ತಾ ಅಲ್ಲದೆ ಇತ್ತೀಚಿನ ದಿನಗಳಲ್ಲಿ ಕಲೆಯ ಜೊತೆಗೆ ಇತರ ವೃತ್ತಿಗಳ ಕಡೆ ವಲಸೆ ಹೋಗುತ್ತಿದ್ದಾರೆ. ಕೃಷಿ ಕೂಲಿ, ಗೃಹ ಕೈಗಾರಿಕೆಯಲ್ಲಿ, ಊರೂರು ಅಲೆದು ಸಣ್ಣ ಪುಟ್ಟ ಪ್ಲಾಸ್ಟಿಕ್ ವಸ್ತುಗಳನ್ನು ಮಾರಾಟ ಮಾಡುವ ಸಂಗತಿಯನ್ನು ಕಾಣಲಾಗಿದೆ. ತಾವು ಜೀವಿಸಲು ನೆರವಾಗುವ ವೃತ್ತಿಯ ಕಡೆಗೆ ವಲಸೆ ಹೋಗುತ್ತಿದ್ದಾರೆ, ಅಲ್ಲದೆ ಅಧಿಕ ಆದಾಯವನ್ನು ಗಳಿಸಿ ಸಮಾಜದಲ್ಲಿ ಪ್ರಬಲರಾಗಲು ಪ್ರಯತ್ನ ಪಡುತ್ತಿದ್ದಾರೆ. ಉತ್ತಮವಾದ ಜೀವನಮಟ್ಟ, ಶಿಕ್ಷಣ ಪಡೆಯಲು ಹವಣಿಸುತ್ತಿದ್ದಾರೆ.

ಅಲ್ಲದೆ ಅಭಿವೃದ್ಧಿಯ ಒಂದು ದೃಷ್ಟಿಯಿಂದ ಕಲೆಯ ಕಡೆಗೆ ಆಸಕ್ತಿ ಇದ್ದರೂ ಕೂಡ ಕಲೆಯಿಂದ ಬರುವ ಆದಾಯ ಕಡಿಮೆಯಿದ್ದು, ಅದರಲ್ಲಿ ಬದುಕಲು ಅಸಾಧ್ಯವಾದಾಗ ಇತರೆ ವೃತ್ತಿಗಳ ಕಡೆ ಗಮನ ಹರಿಸಿ ಉತ್ತಮವಾದ ಜೀವನಮಟ್ಟವನ್ನು ರೂಪಿಸಿಕೊಳ್ಳಲು ಕಲೆಯನ್ನು ಮರೆಯಬಹುದು ಎಂಬುವುದು ಈ ಸಮುದಾಯದ ಜನರಲ್ಲಿ ನೋಡಲಾಗಿದೆ.

ಈ ಸಮುದಾಯದ ಕಲೆಯನ್ನು ಪ್ರೋತ್ಸಾಹಿಸಲು ಸರ್ಕಾರವು ನಾಡಿನಲ್ಲಿ ನಡೆಸುವ ಉತ್ಸವಗಳಲ್ಲಿ ಈ ಕಲೆಯನ್ನು ಪ್ರದರ್ಶಿಸಲು ಈ ಸಮುದಾಯದ ಕಲಾವಿದರಿಗೆ ಅವಕಾಶ ಮಾಡಿಕೊಟ್ಟರೆ ಈ ಕಲೆಯನ್ನು ಉನ್ನತಮಟ್ಟದಲ್ಲಿ ಬೆಳೆಸಲು ನೆರವಾಗುತ್ತದೆ. ಇಲ್ಲವಾದಲ್ಲಿ ಆಧುನಿಕ ಯುಗದಲ್ಲಿ ಈ ಕಲೆಯು ನಶಿಸಿ ಹೋಗುತ್ತದೆ ಎಂಬ ಭಯ ಸಮುದಾಯದಲ್ಲಿ ಮೂಡಬಹುದಾಗಿದೆ.

**೫.೩. ಸರಕಾರದ ಯೋಜನೆಗಳು**

"ವೇಷಗಾರರನ್ನು ೧೮೯೧ ಕುರಿತು ಕೇಂದ್ರೀಯ ಪ್ರಾಂತ್ಯದ ಜನಗಣತಿ ಆಯುಕ್ತರ ಅಭಿಪ್ರಾಯವೇನೆಂದರೆ ಬಹುರೂಪಿಗಳು ನಿರ್ದಿಷ್ಟವಾದ ವೃತ್ತಿಯೊಂದಿಗೆ ಗುರುತಿಸಿಕೊಳ್ಳುವವರನ್ನು ಇಂತಹದೆ ಜಾತಿಯವರೆಂದು ಉಲ್ಲೇಖಿಸಬಹುದು. ಗಂಡಸರು ವೃತ್ತಿಪರ ಕತೆಗಾರರು, ಏಕಾಭಿನಯ, ಅಣುಕುದಾರರಾದ ಇವರು ಮನುಷ್ಯನ ಮತ್ತು ಪ್ರಾಣಿಗಳ ನಡವಳಿಕೆಗಳನ್ನು ಅನುಕರಿಸುವರು. ಗಂಡು ಮಕ್ಕಳಿಗೆ ನೃತ್ಯ ತರಬೇತಿ ನೀಡುತ್ತಾರೆ. ಇವರು ನೀಡುವ ಪ್ರದರ್ಶನಗಳಿಗೆ ಸಂಭಾವನೆಯನ್ನು ದೂರದಿಂದ ಎಸೆಯುತ್ತಾರೆ. ಮಹಾರ್, ಮಾಂಗ್ ಮತ್ತು ಮರಾಠ ಪ್ರಾಂತ್ಯದ ೧೯೫೬ರಲ್ಲಿ ಸರ್ಕಾರ ಕೆಲವು ಜಾತಿಗಳಿಗೆ ಪ್ರಾದೇಶಿಕ ವ್ಯಾಪ್ತಿ ನಿಗದಿ ಪಡಿಸಿತ್ತು. ಅವುಗಳೆಲ್ಲವೂ ದಕ್ಷಿಣ ರಾಜ್ಯದ ನೆರೆಹೊರೆ ಜಿಲ್ಲೆಗಳಾಗಿದ್ದವು. ಬಹುರೂಪಿಗಳಾದವರು ಬೇರಾಕ್‌ನಲ್ಲಿ ಆಗಾಗ ಕಾಣಿಸಿಕೊಳ್ಳುವರು. ಭಿಕ್ಷುಕರಾದವರು ಪೂರ್ವದಿಂದಲೂ ತಮ್ಮನ್ನು ಸಂಬಾಳಿಸುವ ಜಾತಿಯ ಜನರುಗಳ ಬಳಿ ಬೇಡುತ್ತಾರೆ.

ಅನಾದಿ ಕಾಲದಿಂದಲೂ ಆಸ್ತಿಪಾಸ್ತಿಗಳಿಲ್ಲದೆ ನಿರ್ಗತಿಕರಾದ ಇವರು ಜೀವನೋಪಾಯಕ್ಕೆ ಇಂತಹ ವೃತ್ತಿಯನ್ನು ಕೈಗೊಂಡಿದ್ದಾರೆ. ಅಂದರೆ ಅಂದಿನ ಜೀವನ ವಿಧಾನವನ್ನು ಸಂಕ್ಷಿಪ್ತವಾಗಿ ತಿಳಿಸುತ್ತದೆ.

ಮೊದಲನೆಯದಾಗಿ ಬುಡ್ಗ ಜಂಗಂ ಕುಲ ನಿಜಾಂ ಪ್ರಭುತ್ವದಲ್ಲಿ ಬಂದು ೧೯೪೪ರಲ್ಲಿ ರಾಜ್ಯ ಪತ್ರದಲ್ಲಿ ಗುರುತಿಸಿದರು. ಆ ಪತ್ರದಲ್ಲಿ ಬೇಡ ಜಂಗಂನೊಂದಿಗೆ ಕಲಿಸಿ ಬುಡ್ಗ ಜಂಗಂ ಕುಲವನ್ನು ಬೇಡ (ಬುಡ್ಗ) ಜಂಗಂ ಎಂದು ಕ್ರಮ ಸಂಖ್ಯೆ ೪ರಲ್ಲಿ ಗುರುತಿಸಿದರು.

೧೯೫೧ರ ಜನಗಣತಿಯ ಪ್ರಕಾರ ಪರಿಶಿಷ್ಟ ಜಾತಿಯಾಗಿ ಗುರುತಿಸಿದ್ದು ಕೇವಲ ೩೨ ಕುಲಗಳು ಮಾತ್ರ, ಆ ಪಟ್ಟಿಯಲ್ಲಿ ಬುಡ್ಗ ಜಂಗಂ ಕುಲ ಕ್ರಮಸಂಖ್ಯೆ ೪ರಲ್ಲಿ ಬೇಡ (ಬುಡ್ಗ) ಜಂಗಂ ಎಂಬ ಹೆಸರಿನಿಂದ ಗುರುತಿಸಲಾಗಿದೆ. ಭಾರತದ ಆಡಳಿತದ ಜನಗಣತಿಯ ದಾಖಲೆಯ ಆಧಾರದಿಂದ ೧೯೫೬ರಲ್ಲಿ ಬಂದ ಸರ್ಕಾರಿ ಆದೇಶದ ಪ್ರಕಾರ ಈ ಕುಲದ ಕ್ರಮಸಂಖ್ಯೆ ೪ರಲ್ಲಿಯೇ ಬೇಡ (ಬುಡ್ಗ) ಜಂಗಂ ಎಂದು ಗುರುತಿಸಲಾಯಿತು. ಅದು ತೆಲಂಗಾಣ ಜಿಲ್ಲೆಯಲ್ಲಿಯೇ ಮಾತ್ರ ಈ ಜನರಿದ್ದಾರೆಂದು ನಮೂದಿಸಲಾಯಿತು. ಇದನ್ನೇ ೧೯೭೧ರಲ್ಲಿಯೂ ಸಹ ಯಥಾವತ್ತಾಗಿ ಆಡಳಿತ ಮುಂದುವರಿಯಿತು.

೧೯೭೬ರಲ್ಲಿ ಹೊರಡಿಸಿದ ರಾಜ್ಯಪ್ರದಲ್ಲಿ ಬುಡ್ಗ ಜಂಗಂ, ಬೇಡ ಜಂಗಂ ಬ್ರಾಕೆಟ್ ತೆಗೆದುಹಾಕಿ ಕ್ರಮ ಸಂಖ್ಯೆ ೯ರಲ್ಲಿ ಈ ಎರಡು ಕುಲಗಳನ್ನು ಬೇರೆ ಬೇರೆಯಾಗಿ ಪ್ರಸ್ತಾಪಿಸಿದರು. ಒಳಗಡೆ ತೆಲಂಗಾಣ ಜಿಲ್ಲೆಗೆ ಸೀಮಿತವಾದ ಈ ಕುಲವನ್ನು ರಾಷ್ಟ್ರವ್ಯಾಪಿಯಾಗಿ ಗುರುತಿಸಿದರು. ಇದರಿಂದ ಒಂದು ಅನಾಹುತ ಜರುಗಿತು. ಬೇಡ ಜಂಗಂ ಹೆಸರಿನಿಂದ ಶ್ರೀ ನಾಗಂ ಚಂದ್ರಶೇಖರಲಿಂಗಂ ಬಂಗೋಲು ಅವರು ಭಾರತೀಯ ಆಡಳಿತ ಸೇವೆಗೆ ಆಯ್ಕೆಯಾದ ಸಂದರ್ಭದಲ್ಲಿ ತಪ್ಪು ಜಾತಿ ಪ್ರಮಾಣ ಪತ್ರ ಹೊಂದಿದ್ದಾನೆಂದು ಆಡಳಿತ ಶಾಖೆ ಈತನನ್ನು ವಿರೋಧಿಸಿದರು. ೧೯೮೩ರಲ್ಲಿ ಇವರು ಹೈಕೋರ್ಟಿಗೆ ರಿಟ್ ಸಲ್ಲಿಸಿದರು. ಕೇಸು ಮುಂದುವರಿಯುತ್ತಿರಬೇಕಾದರೆ ಸಮಾಜ ಕಲ್ಯಾಣ ಇಲಾಖೆಯ ಕಾರ್ಯದರ್ಶಿ ೧೯೮೮ರ ಕಾಯ್ದೆಯನ್ನು ಜಾರಿಗೊಳಿಸಿ, ಕುಲ ದೃಢೀಕರಣ ನೀಡುವ ಅಧಿಕಾರ (MRO) Mandal Revinue Office ನಿಂದ (RDO) Revenue Department Office ಪರಧಿಗೆ ತಂದರು. ಬೇಡ ಜಂಗಂ ಕುಲ ಆಂಧ್ರಪ್ರದೇಶದಲ್ಲಿ ಎಲ್ಲಿಯೂ ಇಲ್ಲ. ಇವರು ಮಾಂಸಹಾರಿಗಳು, ಉಡ, ಇಲಿ, ಕುಂದಲಿ, ಮೊಲ ಮೊದಲಾದವು ತಿನ್ನುತ್ತಾರೆ. ಬೇಟೆ ಅವರ ಸಂಪ್ರದಾಯ ಇರುವುದನ್ನು ಇತರರು ಕೀಳಾಗಿ ಕಾಣುತ್ತಾರೆ. ಇವರನ್ನು ಬೇಡ ಜಂಗಾಲು ಎಂದು, ಬುಡ್ಗ ಜಂಗಾಲು ಎಂದು ಗುರುತಿಸಬೇಕೆಂದು ಆ ಪತ್ರದಲ್ಲಿ ಪ್ರಸ್ತಾಪಿಸಲಾಯಿತು.

೧೯೫೫ರಲ್ಲಿ ಬಂದ ಪರಿಶಿಷ್ಟ, ಹಿಂದುಳಿದ ವರ್ಗಗಳ ಕಮೀಷನರ್ ಈ ರೀತಿ ಹೇಳಿದರು. ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿದ ಎಲ್ಲಾ ಕುಲಗಳನ್ನು ಕೀಳುತನದಿಂದ ಕಾಣದಿದ್ದರೂ, ಅವರ ಆರ್ಥಿಕ, ವಿದ್ಯಾ ವಿಷಯದಲ್ಲಿ ಹಿಂದುಳಿವಿಕೆಯನ್ನು ಗುರುತಿಸಿ, ಅವರನ್ನು ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸಬೇಕಾಗಿ ಬಂದಿವೆ ಎಂಬ ಅಂಶವನ್ನು ನ್ಯಾಯಮೂರ್ತಿಗಳು ಉದಾಹರಿಸಿ, ನಾಗಂಚಂದ್ರಶೇಖರಲಿಂಗಂ ಅವರಿಗೆ ಭಾರತೀಯ ಆಡಳಿತ ಸೇವೆಗೆ ಉದ್ಯೋಗ ನೀಡಲು ನಿರಾಕರಿಸಿದ್ದು ದುರುದ್ದೇಶದಿಂದ ಕೂಡಿದೆ ಎಂದು ಹೇಳಿ ಇವರನ್ನು ಭಾರತೀಯ ಆಡಳಿತ ಸೇವೆ ಶಿಕ್ಷಣ ಸಂಪುಟಕ್ಕೆ ಆಯ್ಕೆಯಾಗುವಂತೆ ತೀರ್ಪು ನೀಡಿತು.

೧೯೭೬ರ ರಾಜ್ಯಪ್ರದಲ್ಲಿ ಈ ಕುಲವನ್ನು ಕ್ರಮ ಸಂಖ್ಯೆ ೯ ಆಗಿರಬೇಕಾದರೆ ಮತ್ತೆ ಸರಕಾರಿ ಆಡಳಿತ ಸೇವೆ ೨೦೪ರಲ್ಲಿ ಕ್ರಮ ಸಂಖ್ಯೆ ೬ರಲ್ಲಿ ಇರಿಸಿ ಬೇಡ ಜಂಗಂ, ಬುಡಗ ಜಂಗಮ ಕುಲವನ್ನು ಮತ್ತೆ ಬ್ರಾಕೆಟ್‌ನಲ್ಲಿ ಕಲಿಸಿ ಬೇಡ (ಬುಡ್ಗ) ಜಂಗಂ ಎಂದು ಹೆಸರಿಸಿದರು. ಹೀಗೆ ಇರಬೇಕಾದರೆ ೬.೬.೧೯೮೬ನೇ ಸರ್ಕಾರಿ ಆದೇಶದ ೧೨೨ ಜಾರಿಗೊಳಿಸಿ ಅದರಲ್ಲಿ ಇವರ ಕುಲವನ್ನು ಕ್ರಮ ಸಂಖ್ಯೆ ೫ರಲ್ಲಿ ಬೇಡ ಬುಡ್ಗ ಜಂಗಂ ಎಂದು ಹೆಸರಿಸಿದರು. ಮತ್ತೆ ೧೯೮೬ರಲ್ಲಿ ಹೊಸ ನಿಯಮ ಹೊರಡಿಸಿ ಬೇಡ, ಬುಡ್ಗ ಜಂಗಂ ಕುಲವನ್ನು ಸೇರಿ ೫೬ ಕುಲಗಳನ್ನು ಸರಿಯಾಗಿ ವಿಚಾರಣೆ ನಡೆಸಿ ರೆವಿನ್ಯೂ ಇಲಾಖೆಗಳು ಜಾತಿ ಪ್ರಮಾಣಪತ್ರ ನೀಡಬೇಕೆಂದು ನಿರ್ಬಂಧ ಹೇರಿದರು. ಇದರಿಂದ ಜಾತಿ ಪ್ರಮಾಣ ಪತ್ರಗಳನ್ನು ನೀಡಲು

ಸಂಬಂಧಿಸಿದ ಅಧಿಕಾರಿಗಳು ತೊಂದರೆ ನೀಡುತ್ತಿದ್ದಾರೆ. ಇದು ಆಂಧ್ರಪ್ರದೇಶದ ಚರಿತ್ರೆಯಾದರೆ ಇನ್ನು ಕರ್ನಾಟಕದಲ್ಲಿ ೧೯೭೬ರಲ್ಲಿ ಹೊರಡಿಸಿದ ಪಟ್ಟಿಯ ಪ್ರಕಾರ ರಾಜ್ಯಗಳ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಕ್ರಮಸಂಖ್ಯೆ ೧೯ರಲ್ಲಿ ಮತ್ತು ಮಹಾರಾಷ್ಟ್ರದಲ್ಲಿ ಅದೇ ಪಟ್ಟಿಯ ಕ್ರಮಸಂಖ್ಯೆ ೯ರಲ್ಲಿ ಬೇಡ ಜಂಗಂ ಮತ್ತು ಬುಡಗ ಜಂಗಮ ಎಂಬ ಎರಡು ಜಾತಿಗಳು ದಾಖಲಾಗಿವೆ. ಇವು ಬೇಡ ಜಂಗಮ, ಬುಡಗ ಜಂಗಾಲು ಸಮುದಾಯವನ್ನೇ ಪ್ರತಿನಿಧಿಸುವ ಪದಗಳಾಗಿದ್ದರೂ ಸರ್ಕಾರಕ್ಕೆ ಬಿಡಿಸಲಾಗದ ಕಗ್ಗಂಟಾಗಿರುವುದರಿಂದ ಸಂವಿಧಾನಬದ್ಧ ಸೌಲಭ್ಯಗಳಿಂದ ಈ ಸಮುದಾಯಗಳು ವಂಚಿಸಲ್ಪಟ್ಟಿರುವುದು. ಆಂಧ್ರಪ್ರದೇಶದಲ್ಲಿ ೧೯೮೫ರಲ್ಲಿ ಇವರು ಎದುರಿಸುತ್ತಿರುವ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ತಕ್ಕ ನಿರ್ಧಾರ ತೆಗೆದುಕೊಳ್ಳಲು ಜಾತಿ ಪ್ರಮಾಣ ಪತ್ರ ಕೊಡಲು ಮಂಡಲ ರೆವಿನ್ಯೂ ಆಫೀಸ್ ಪರಧಿಯಲ್ಲಿ ಕೊಡಬೇಕೆಂದು ಮುಖ್ಯಮಂತ್ರಿ ಶ್ರೀ ತಾರಕರಾಮರಾವು ಅವರಿಗೆ ೧೯೮೫ರಲ್ಲಿ ಒಂದು ವಿನಂತಿ ಪತ್ರ ಕೊಟ್ಟರು. ಕೆಲವು ಅಧಿಕಾರಿಗಳು ನೀವು ಅಸ್ಪೃಶ್ಯ ಎಂದು ಜಾತಿ ಪ್ರಮಾಣ ಪತ್ರ ಕೊಡಲು ನಿರಾಕರಿಸುತ್ತಿದ್ದಾರೆ. ಆಂಧ್ರಪ್ರದೇಶದಲ್ಲಿ ೧೯೮೬ರಲ್ಲಿ ಸಂಬಂಧಿಸಿದ ಅಧಿಕಾರಿಗಳು ನಿಮಗೆ ನಿಮ್ಮ ಕುಲಗಳು ಮುಟ್ಟಿಸಿಕೊಳ್ಳದಿದ್ದರೆ ಜಾತಿ ಪ್ರಮಾಣ ಪತ್ರ ನೀಡುತ್ತೇವೆ ಎಂದು ಹೇಳಿ ನಿರಾಕರಿಸುತ್ತಿದ್ದಾರೆ. ಇದೆಲ್ಲಿಯ ನ್ಯಾಯ ಒಂದು ಕಡೆ ಆಡಳಿತ ಅಸ್ಪೃಶ್ಯತೆ, ತಪ್ಪು ಎಂದು ಘೋಷಿಸುತ್ತಿರುವಾಗ ಅಧಿಕಾರಿಗಳು ಈ ರೀತಿಯಾಗಿ ಕೇಳುವುದು ಎಷ್ಟರಮಟ್ಟಿಗೆ ಸಮಂಜಸ. ಸ್ವಾತಂತ್ರ್ಯ ಬಂದು ೫೫ ವರ್ಷಗಳು ಕಳೆದರೂ ಇನ್ನೂ ನಮ್ಮಲ್ಲಿ ಅಸ್ಪೃಶ್ಯತೆ ನೋಡಬೇಕೆಂದೇಳುವ ಅಧಿಕಾರಿಗಳ ವರ್ತನೆಗೆ ಆಶ್ಚರ್ಯವಾಗುತ್ತದೆ.

**ಅಭಿವೃದ್ಧಿ ಯೋಜನೆಗಳು**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಇಲ್ಲಿಯವರೆಗೆ ಪರಿಶಿಷ್ಟ ಜಾತಿ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಕೋಟಿಗಟ್ಟಲೆ ಹಣ ಖರ್ಚು ಮಾಡಿದ್ದಾರೆ. ಹಲವಾರು ಯೋಜನೆಗಳನ್ನು ತಯಾರು ಮಾಡಿ ಕಾರ್ಯರೂಪಕ್ಕಿಳಿಸಿದ್ದಾರೆ. ಲಕ್ಷಾಂತರ ಹಿಂದುಳಿದವರು ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುತ್ತಿದ್ದಾರೆ. ಒಟ್ಟಿನಲ್ಲಿ ಹೇಳಬೇಕೆಂದರೆ ಎಷ್ಟು ಸುಧಾರಣೆಯಾಗಬೇಕೋ ಅಷ್ಟು ಆಗಿಲ್ಲವೆನ್ನಬಹುದು. ಏಕೆಂದರೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳಲ್ಲಿ ಈ ಉಪಯೋಗವನ್ನು ಆಯ್ದ ಕೆಲವು ಜಾತಿ ಮತ್ತು ಪಂಗಡಗಳು ಮಾತ್ರ ಪಡೆಯುತ್ತವೆ. ಇನ್ನು ಹಲವಾರು ಸಮುದಾಯಗಳಿಗೆ ಈ ಅಭಿವೃದ್ಧಿ ಯೋಜನೆಗಳು ಪ್ರಯೋಜನ ದೊರೆಯುತ್ತಿದೆ ಎಂಬ ಸಾಮಾನ್ಯ ಜ್ಞಾನವೂ ಕೂಡ ಇಲ್ಲದ ಎಷ್ಟೋ ಜನರಿದ್ದಾರೆ. ಅಂತಹ ಜನಾಂಗಗಳಲ್ಲಿ ಬುಡ್ಗ ಜಂಗಮರು ಒಬ್ಬರು. ಈ ಸಮುದಾಯದ ಎಷ್ಟೋ ಜನರಿಗೆ ಸರ್ಕಾರದ ಅಭಿವೃದ್ಧಿ ಯೋಜನೆಗಳ ಪ್ರಯೋಜನ ಪಡೆಯದೆ ಹಿಂದುಳಿದವರಿಗಿಂತ ಅತಿ ಹಿಂದುಳಿದವರಾಗಿದ್ದಾರೆ. ಕನಿಷ್ಟ ತಮ್ಮ ಜಾತಿಗೆ ಸರ್ಕಾರದಿಂದ ಇಂತಹ ಸೌಲಭ್ಯ ದೊರೆಯುತ್ತದೆ ಎಂದು ಸಹ ಗೊತ್ತಿಲ್ಲ. ಕೆಲವೇ ಸಮುದಾಯಗಳು ಈ ಸೌಲಭ್ಯಗಳನ್ನು ಪಡೆದು ಉದ್ಯೋಗ ಮತ್ತು

ರಾಜಕೀಯದಲ್ಲಿಯೂ ಸಹ ಮುಂದುವರೆಯುತ್ತಿವೆ. ಇಂತಹ ಯೋಜನೆಗಳ ಬಗ್ಗೆ ಕೂಲಂಕುಶವಾಗಿ ವಿಚಾರಿಸಿ ಎಲ್ಲಾರಿಗೂ ಸಮಾನವಾಗಿ ಹಂಚಿಕೆಯಾಗುವಂತೆ ಕಾಳಜಿ ಮತ್ತು ಎಚ್ಚರಿಕೆ ವಹಿಸಬೇಕಾದ ಅಗತ್ಯವಿದೆ. ಮುಖ್ಯವಾಗಿ ಈ ಸಮುದಾಯಕ್ಕೆ ಅರಿವು ಮೂಡಿಸುವುದು ಅವಶ್ಯ.

ಈ ನಿಟ್ಟಿನಲ್ಲಿ ಈ ಸಮುದಾಯಕ್ಕೆ ಕನಿಷ್ಟ ಮಟ್ಟದ ನಾಗರಿಕ ಸೌಲಭ್ಯಗಳನ್ನು ಒದಗಿಸಲು ಸರಕಾರ ಕೆಲವು ಯೋಜನೆಗಳನ್ನು ಜಾರಿಗೊಳಿಸಬೇಕಾದ ಅಗತ್ಯತೆಯನ್ನು ಈ ಕೆಳಗೆ ನೋಡಬಹುದು. ಈ ಸಮುದಾಯದ ಶೇಕಡ ಎಪ್ಪತ್ತರಷ್ಟು ಜನರಿಗೆ ತಮ್ಮದೇಯಾದ ನಿವೇಶನ ಮತ್ತು ವಾಸಿಸಲು ನಿರ್ದಿಷ್ಟ ಸ್ಥಳವೂ ಕೂಡ ಇಲ್ಲದೆ ಊರೂರು ಅಲೆಯುತ್ತಿದ್ದಾರೆ. ಇವರು ಬಿಡಾರಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ಈಗ ಹಿಂದುಳಿದ ಇಂತಹ ಹಲವಾರು ಸಮುದಾಯಗಳು ಸೇರಿ ಆಶ್ರಯ ಮನೆಗಳಿಗಾಗಿ ಹೋರಾಟ ನಡೆಸುತ್ತಿವೆ. ಸರಕಾರ ಇಂತವರ ಸಮಸ್ಯೆಯ ಬಗ್ಗೆ ಮುತುವರ್ಜಿವಹಿಸಿ ಸಮಸ್ಯೆಯನ್ನು ಪರಿಶೀಲಿಸಿ ಅವರ ಅಗತ್ಯತೆಯನ್ನು ಪೂರೈಸಬೇಕಾದದ್ದು ತುರ್ತಾಗಿ ಆಗಬೇಕಾಗಿದೆ.

ಕಲಾಕಾರರಿಗೆ, ಈ ಕಲೆ ನಾಶವಾಗದಂತೆ ಅಗತ್ಯ ಕಲಾಸಾಮಗ್ರಿಗಳನ್ನು ಸರಕಾರವು ನೀಡುವುದರ ಮುಖಾಂತರ ಇವರ ಕಲೆಗೆ ಗೌರವ ನೀಡಬೆಕು. ಹೀಗೆ ಮಾಡುವುದರಿಂದ ಇವರು ತಮ್ಮ ವೃತ್ತಿ ಕಲೆಯನ್ನು ತೊರೆಯದೆ ಹಾಗೆ ಮುಂದುವರೆಸಿಕೊಂಡು ಹೋಗುವುದು ಸಾಧ್ಯವಾಗುತ್ತದೆ. ಇಂದು ಸಾರ್ವಜನಿಕರ ಸಹಾಯ ಇವರಿಗೆ ಸರಿಯಾದ ರೀತಿಯಲ್ಲಿ ಸಿಗುತ್ತಿಲ್ಲ. ಆದ್ದರಿಂದ ಈ ಕಲೆಯನ್ನು ಉಳಿಯುವಂತೆ ನೋಡಿಕೊಳ್ಳಲು ಕೆಲವು ಕಲಾಶಾಲೆಗಳನ್ನು ತೆರೆದು ಇಂತಹ ಕಲೆಗಳ ತರಬೇತಿ ನೀಡುವ ಅವಶ್ಯಕತೆ ಇದೆ. ದೂರದರ್ಶನ, ಸಿನಿಮಾದಂತಹ ಮಾಧ್ಯಮಗಳು ಈ ಕಲೆಗೆ ಪೂರಕವಾಗಿ ಪರಿಣಮಿಸುತ್ತಿವೆಯಾದ್ದರಿಂದ ಈ ರೀತಿಯ ಸಹಾಯ ಬಹಳ ಪರಿಣಾಮಕಾರಿಯಾಗುತ್ತದೆ.

ಹಗಲುವೇಷಗಾರರು ಕಲೆಯನ್ನು ಪ್ರದರ್ಶಿಸಲು ರೈಲು ಮತ್ತು ಬಸ್‌ಗಳನ್ನು ಅಡ್ಡಾಡಲು ಉಚಿತ ಪಾಸ್ ವ್ಯವಸ್ಥೆ ನೀಡಿದರೆ, ಇಲ್ಲವೆ ವಿನಾಯಿತಿ ನೀಡಿದರೆ ಈ ಕಲೆಯನ್ನು ಪ್ರಚಾರ ಮತ್ತು ಇವರ ಜೀವನಮಾರ್ಗಕ್ಕೆ ಕೂಡ ಅನುಕೂಲ ಕಲ್ಪಿಸಿದಂತಾಗುತ್ತದೆ.

ವೃದ್ಧ ಕಲಾಕಾರರಿಗೆ ವೃದ್ಧಾಪ್ಯ ವೇತನವನ್ನು ನೀಡುವುದರ ಮೂಲಕ ಇವರ ಜೀವನದಲ್ಲಿ ಪಡುವ ಜಿಗುಪ್ಸೆಯನ್ನು ಕಡಿಮೆ ಮಾಡಬಹುದು. ಹಿಂದಿನಿಂದಲೂ ಇವರು ಪಡಬಾರದ ಕಷ್ಟಗಳನ್ನೆಲ್ಲಾ ಪಟ್ಟು ಜೀವನವನ್ನು ಹೆದರಿಸಿ ವಿಶಿಷ್ಟವಾದ ಕಲೆಯನ್ನು ಉಳಿಸುವಲ್ಲಿ ಸಹಕಾರಿಯಾದಂತಹ ಇವರನ್ನು ಹೀಗೆ ಪ್ರೋತ್ಸಾಹಿಸಬೇಕಾದ ಅವಶ್ಯವಿದೆ. ಈಗಾಗಲೇ ಆಂಧ್ರಪ್ರದೇಶದಲ್ಲಿ ಈ ಸೌಲಭ್ಯವನ್ನು ಕೆಲವರು ಪಡೆಯುತ್ತಿದ್ದಾರೆ. ಕರ್ನಾಟಕದಲ್ಲಿಯೂ ಈ ವ್ಯವಸ್ಥೆಯನ್ನು ಜಾರಿಗೊಳಿಸುವುದು.

ಇಂದು ಇವರ ಕಲೆಗೆ ಸರಿಯಾದ ಪ್ರತಿಫಲ ಸಿಗದೆ ಜೀವನ ನಡೆಸುವುದೇ ದುಸ್ತರವಾಗಿದೆ. ಈಗ ತಮ್ಮ ಜೀವನದ ನಿರ್ವಹಣೆಗೆ ಪರ್ಯಾಯವಾಗಿ ಅನ್ಯ ಕೆಲಸಗಳನ್ನು ಅರಸಿ ಹೋಗುವುದು ಅನಿವಾರ್ಯವಾಗಿದೆ. ಹೀಗೆ ಬೇರೆ ವೃತ್ತಿಯನ್ನು ಕೈಗೊಳ್ಳಲು ಎದುರಾಗಿರುವ ಮುಖ್ಯ ಸಮಸ್ಯೆಯೆಂದರೆ ಬಂಡವಾಳ. ಈಗ ಇವರಲ್ಲಿ ಬಂಡವಾಳವಿಲ್ಲದಿರುವ ಕಾರಣ ಇವರಿಗೆ ಬೇರೆಯವರು ಸಾಲ ನೀಡಲು ಹಿಂಜರಿಯುತ್ತಿದ್ದಾರೆ. ಅದಕ್ಕೆ ಇವರು ಜೀವನ ಮಾಡುವ ವಿಧಾನ ನೋಡಿ ಇವರು ಯಾವ ರೀತಿ ಸಾಲ ತೀರಿಸುತ್ತಾರೆಂದು ಆತಂಕ ಪಡುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಸರಕಾರವೇ ಮುಂದೆ ಬಂದು ಇವರಿಗೆ ಪ್ರತ್ಯೇಕ ಯೋಚನೆಗಳನ್ನು ಮಾಡಿ ಬ್ಯಾಂಕಿನಲ್ಲಿ ಸಾಲದ ವ್ಯವಸ್ಥೆ ನೀಡಬೇಕು. ಈಗಾಗಲೇ ಸಣ್ಣ ಪುಟ್ಟ ವ್ಯಾಪಾರ ಮಾಡುವ ಇವರಿಗೆ ಸಾಲ ನೀಡುವುದರಿಂದ ಇವರು ತಮ್ಮ ವ್ಯಾಪಾರದ ಕ್ಷಿತಿಜವನ್ನು ದೀರ್ಘವಾಗಿಸಿಕೊಂಡು ಜೀವನಮಟ್ಟದಲ್ಲಿ ಸುಧಾರಣೆಯಾಗುತ್ತದೆ. ಈ ಬುಡಕಟ್ಟು ಸಮುದಾಯದ ಅಭಿವೃದ್ಧಿಗೆ ಈ ಮೇಲಿನ ಸೌಲಭ್ಯಗಳಿಲ್ಲದೆ ಇನ್ನೂ ಸೂಕ್ತ ಮಾರ್ಗವನ್ನು ಕಂಡುಹಿಡಿದು ಇವರ ಅಭಿವೃದ್ಧಿಗೆ ಶ್ರಮಿಸಬೇಕಾಗಿದೆ. ಇವರಲ್ಲಿ ಮುಖ್ಯವಾಗಿ ಸಂಘಟನೆಯ ಕೊರತೆ ಎದ್ದು ಕಾಣುತ್ತದೆ. ಅವಿದ್ಯಾವಂತರಾದ ಇವರಿಗೆ ಹೋರಾಟದ ಮಾರ್ಗಗಳೇ ತಿಳಿಯದೆ ಹೋರಾಟಕ್ಕೆ ಹೆದರುತ್ತಿದ್ದಾರೆ. ಆದಕಾರಣ ತಮ್ಮ ಸಮುದಾಯಗಳಲ್ಲಿ ಬುದ್ಧಿವಂತರಾದವರು ಮೂಢನಂಬಿಕೆಯಿಂದ ಅಭಿವೃದ್ಧಿ ನಿರೋಧಕವಾದ ಆಲೋಚನೆಗಳನ್ನು ಅರ್ಥವಿಲ್ಲದ ಕುಲಸಂಪ್ರದಾಯಗಳನ್ನು ಬಿಟ್ಟು ಆಧುನಿಕತೆಯೆಡೆಗೆ ಬರಬೇಕು. ಯಾರೋ ಮಾಡುತ್ತಾರೆಂದು ಕೈಕಟ್ಟಿ ಕುಳಿತರೆ ಯಾರೂ ಮಾಡಿಕೊಡುವುದಿಲ್ಲ. ನಮ್ಮ ಕೆಲಸವನ್ನು ನಾವೇ ಮಾಡಿಕೊಳ್ಳಬೇಕು.

**ಶೈಕ್ಷಣಿಕ ಯೋಜನೆಗಳು**

ಎಲ್ಲಾ ಜಾತಿಗಳು ಅಷ್ಟೋ, ಇಷ್ಟೋ ಅಭಿವೃದ್ಧಿ ಮಾರ್ಗದಲ್ಲಿ ನಡೆಯುತ್ತಿವೆ. ಎಷ್ಟೋ ನೋವುಗಳನ್ನು ಅನುಭವಿಸುತ್ತಿರುವ ಬುಡಗ ಜಂಗಾಲರು ಅಥವಾ ವೇಷಗಾರರು ಮಾತ್ರ ಸಂಘಟಿತರಾಗಿ ಮುಂದಕ್ಕೆ ಬರುತ್ತಿಲ್ಲ. ಸಮಾಜದಲ್ಲಿರುವವರೆಲ್ಲಾ ಬೆಳೆಯುತ್ತಿದ್ದರೆ ಬುಡ್ಗ ಜಂಗಮ ಮಾತ್ರ ಹಿಂದುಳಿಯುತ್ತಿದ್ದಾರೆ. ಇದಕ್ಕೆ ಕಾರಣ ಸರಿಯಾದ ವಿದ್ಯಾಭ್ಯಾಸ ಇಲ್ಲದಿರುವುದು.

ಇವರು ಪೂರ್ವದಿಂದಲೂ ಊರ ಹೊರಗಡೆ ಬಿಡಾರಗಳನ್ನು ಹಾಕಿಕೊಂಡು ಸಾಮೂಹಿಕವಾಗಿ ಜೀವಿಸುತ್ತಿದ್ದಾರೆ. ಅದಕ್ಕಾಗಿ ಸಾಮಾಜಿಕವಾಗಿ ಹಿಂದೆ ಬಿದ್ದಿದ್ದಾರೆ. ವಿದ್ಯಾಭ್ಯಾಸದಲ್ಲಿಯೂ ಎಷ್ಟು ಹಿಂದೆ ಇದ್ದಾರೆಯೋ, ಉದ್ಯೋಗ ವಿಷಯದಲ್ಲಿಯೂ ಸಹ ಸಹಜವಾಗಿ ಅಷ್ಟೇ ಹಿಂದೆ ಬಿದ್ದಿದ್ದಾರೆ.

ಕಲೆಯೇ ಇವರ ಜೀವನದ ಉಸಿರಾಗಿರುವುದರಿಂದ ಹುಟ್ಟಿದ ಪ್ರತಿಯೊಂದು ಮಕ್ಕಳಿಗೂ ತಮ್ಮ ವೇಷಗಾರಿಕೆ ವೃತ್ತಿಯನ್ನೇ ಕಲಿಸಿ ಅದರಲ್ಲಿಯೇ ಮುಂದುವರಿಯುತ್ತಿದ್ದಾರೆ. ಸಂಚಾರಿಗಳಾದ ಇವರು ಒಂದು ಊರಿನಲ್ಲಿ ನೆಲೆ ಇಲ್ಲದುದರಿಂದ ಇವರ ಮಕ್ಕಳನ್ನು ಶಾಲೆಗೆ ಸೇರಿಸದೆ

ಶಿಕ್ಷಣದಿಂದ ವಂಚಿತರಾಗಿದ್ದಾರೆ. ಒಂದು ಕಾರಣವಾದರೆ ಓದುವವರಿಗೆ ಜಾತಿ ಪ್ರಮಾಣ ಪತ್ರ ನೀಡುವಲ್ಲಿ ತಕರಾರು ಮಾಡಿ ಹಲವಾರು ಮಕ್ಕಳ ವಿದ್ಯಾಭ್ಯಾಸದಿಂದ ವಂಚಿತರಾದವರು ಕಡಿಮೆ ಸಂಖ್ಯೆಯಲ್ಲಿಯೇ ಇದ್ದಾರೆ. ಅಲ್ಪಸ್ವಲ್ಪ ಜನರಿಗೆ ಓದಿಸಬೇಕೆಂಬ ಮನಸ್ಸುಳ್ಳವರಿಗೆ ಇಂತಹ ಪರಿಸ್ಥಿತಿಯಿಂದ ನಿರಾಶೆಯುಂಟಾಗಿದೆ. ಒಟ್ಟಿನಲ್ಲಿ ಈ ಸಮುದಾಯದವರು ಸಂಪೂರ್ಣವಾಗಿ ಶಿಕ್ಷಣದಿಂದ ವಂಚಿತರಾಗಿದ್ದಾರೆ.

ಈ ಸಮುದಾಯಕ್ಕೆ ವಿದ್ಯಾಭ್ಯಾಸ ನೀಡಲು ಇವರು ವಾಸಿಸುವ ಜಾಗಗಳಲ್ಲಿ ಶಾಲೆಗಳನ್ನು ನೀಡಬೇಕಾದುದು ಬಹಳ ಅವಶ್ಯವಾಗಿದೆ. 'ವಿದ್ಯೆ ಇಲ್ಲದವರ ಮುಖ ಹದ್ದಿಗಿಂತ ಕಡೆ' ಎನ್ನುವಂತೆ ಈ ಸಮುದಾಯಕ್ಕೆ ವಿದ್ಯೆ ಇಲ್ಲದೆ ಸಮಾಜದಲ್ಲಿ ಸರಿಸಮಾನವಾಗಿ ಉದ್ಯೋಗ ಪಡೆಯಲು ಅವಕಾಶವಿಲ್ಲದಂತಾಗಿದೆ." (ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಬಿ.ಎಂ.ಎಂ. ಆರಾಧ್ಯ, ಅಪ್ಪು ಪ್ರಕಾಶನ, ರಾಜಾಜಿನಗರ ಬೆಂಗಳೂರು, ಪುಟ ಸಂಖ್ಯೆ ೨೦೦

**ಅಡಿ ಟಿಪ್ಪಣಿಗಳು**

೧. ಸಾರಿಕದೇವಿ, ೨೦೦೬, ಬುರ್ರಕಥೆ ಈರಮ್ಮ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗ.

೨. ಬಾಲಗುರುಮೂರ್ತಿ, ಪ್ರತಾಪ ಆರ್. ಬಹುರೂಪಿ, ೨೦೦೮, ಬುಡ್ಗ ಜಂಗಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೩. ಆರಾಧ್ಯ ಬಿ.ಎಂ.ಎಂ., ೧೯೫೮, ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಅಪ್ಪು ಪ್ರಕಾಶನ, ರಾಜಾಜಿನಗರ ಬೆಂಗಳೂರು.



## ಅಧ್ಯಾಯ: ಆರು

# ಸಮಾರೋಪ

"ಬದುಕು ಹೋರಾಟ, ಹೋರಾಟವೇ ಬದುಕು" ಪೂರ್ವಜರು ಅನುಸರಿಸಿಕೊಂಡು ಬಂದು ಬದುಕಿನ ಅನುಭವ ಅಥವಾ ಕೆಲಸದ ತಿಳುವಳಿಕೆ ಇರಬೇಕು ಅಂದಾಗ ಮಾತ್ರ ಸುಖವಾಗಿ ಬದುಕು ಸಾಗಿಸಬಹುದು. ಅಂದರೆ ಬುಡ್ಗ ಜಂಗಮ ಸಮುದಾಯದ ವಂಶಜರು ಯಾವುದೇ ರೀತಿಯ ಆಧುನಿಕ ಕೆಲಸದ ನೈಪುಣ್ಯತೆ ಉಳ್ಳವರಲ್ಲಿ ಕೇವಲ ಭಿಕ್ಷೆ ಬೇಡುವುದು ಮತ್ತು ಕಲೆ ಪ್ರದರ್ಶನ ಮಾಡಿ ಜೀವನ ಸಾಗಿಸುತ್ತಾರೆ. ಆದರೆ ಸಿನಿಮಾ ಜಗತ್ತಿನಲ್ಲಿ ಇವರ ಕಲೆ ಕಣ್ಮರೆಯಾಯಿತು. ಭಿಕ್ಷೆ ಬೇಡುವುದೇ ಇವರ ಮೂಲ ವೃತ್ತಿಯಾಯಿತು. ಆದರೆ ನಾಚಿಕೆ ಪಡುವವರು ಈ ಕೂಲಿಯನ್ನು ಮಾಡಿ ಜೀವಿಸುತ್ತಿದ್ದಾರೆ. ಸ್ವಾತಂತ್ರ್ಯ ದೊರೆತು ೬೯ ವರ್ಷ ಕಳೆದರು ಇವರಿಗೆ ಯಾವುದೇ ರೀತಿಯ ಸೌಲಭ್ಯ ನೀಡದೆ ಇರುವುದು ಆಶ್ಚರ್ಯಕರ ಸಂಗತಿ. ಈಗಲಾದರೂ ಸರ್ಕಾರವು ಇಂತಹ ಸಮುದಾಯದವರಿಗೆ ಗುರುತಿಸಿ ಇವರಿಗೆ ದೊರೆಯಬೇಕಾದ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಸುಧಾರಿಸಲು ಪ್ರಯತ್ನಿಸಬೇಕು.

ಸಮುದಾಯದಲ್ಲಿ ಕಂಡುಬರುವ ಆರ್ಥಿಕ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಸುಧಾರಣೆಗಳನ್ನು ಸಾಧಿಸಲು ಸರಕಾರವು ಹಲವಾರು ರೀತಿಯ ಯೋಜನೆಗಳನ್ನು ಕೈಗೊಳ್ಳಬೇಕು. ಅಲ್ಲದೇ ಸರಕಾರವು ಇವರಿಗೆ ವಿಶೇಷವಾದ ರೀತಿಯ ಸೌಲಭ್ಯವನ್ನು ಒದಗಿಸಲು ಪ್ರಯತ್ನವನ್ನು ಸರಕಾರ ಕೈಗೊಳ್ಳಬೇಕು. ಅಲ್ಲದೆ ಅವರ ಕಲೆ ಮತ್ತು ಸಂಸ್ಕೃತಿಗೆ ಬೆಂಬಲ ನೀಡಿ ಪ್ರೋತ್ಸಾಹವನ್ನು ನೀಡುವುದರ ಮೂಲಕ ಪ್ರಶಸ್ತಿಗಳನ್ನು ನೀಡಿ ಗೌರವಿಸಬೇಕು. ಪ್ರಸ್ತುತ ದಿನಗಳಲ್ಲಿ ಸರ್ಕಾರದ ಅಧೀನದಲ್ಲಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಬುಡ್ಗ ಜಂಗಮರ ಕಲೆ ಮತ್ತು ಸಂಸ್ಕೃತಿಯನ್ನು ಪೋಷಿಸಲು ಜಿಲ್ಲಾವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಮುದಾಯದ ಬೆಳವಣಿಗೆಗೆ ಸಹಕಾರ ನೀಡುತ್ತದೆ.

## ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನವು "ಬುಡ್ಗ ಜಂಗಮ ಸಮುದಾಯದ ಆರ್ಥಿಕ ಅಧ್ಯಯನ (ಕೊಪ್ಪಳ ಜಿಲ್ಲೆಯನ್ನು ಅನುಲಕ್ಷಿಸಿ)"ವಾಗಿದ್ದು ಈ ಅಧ್ಯಯನವು ಬುಡ್ಗ ಜಂಗಮ ಜನಾಂಗದವರ ಆರ್ಥಿಕ ಅಧ್ಯಯನ ಮಾಡಲಾಗಿದ್ದು ಅವರು ಆರ್ಥಿಕವಾಗಿ ಎದುರಿಸುತ್ತಿರುವ ಸಮಸ್ಯೆಗಳನ್ನು ಮತ್ತು ಆರ್ಥಿಕ ಪರಿಸ್ಥಿತಿಗಳನ್ನು ಹಾಗೂ ಈ ಜನಾಂಗಕ್ಕೆ ಸರ್ಕಾರವು ನೀಡಿರುವ ಸೌಲಭ್ಯಗಳ ಕುರಿತು ಒಂದು ಅಧ್ಯಯನವಾಗಿದೆ.

೧. ಆಧುನಿಕತೆಯ ಸಂದರ್ಭದಲ್ಲಿ ಬುಡ್ಗ ಜಂಗಮ ಸಮುದಾಯದ ಸಾಮಾಜಿಕ ಜೀವನದಲ್ಲಿ ಕೆಲವೊಂದು ಮಾರ್ಪಾಡುಗಳುವಾಗಿದ್ದರು ಸಹ ತಮ್ಮ ಪಾರಂಪರಿಕ ನಿರ್ಬಂಧಗಳನ್ನು ಇಂದಿಗೂ ಪಾಲಿಸಿಕೊಂಡು ಬರುತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨. ಬುಡ್ಗ ಜಂಗಮ ಸಮುದಾಯದವರು ಇಂದಿಗೂ ಸಹ ತಮ್ಮ ಪಾರಂಪರಿಕ ವೃತ್ತಿಯಾದ ಹಗಲುವೇಷಗಾರಿಕೆಯನ್ನು ಮಾಡುತ್ತಾ ಜೀವನ ಸಾಗಿಸುತ್ತಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಇವರ ಕಲೆಯನ್ನು ಯಾರು ಪ್ರೋತ್ಸಾಹಿಸದ ಕಾರಣ ಜೀವನಕ್ಕಾಗಿ ಕೃಷಿ, ಕೂಲಿ, ಪ್ಲಾಸ್ಟಿಕ್ ಬುಟ್ಟಿ ಮಾರಾಟ, ಹಣ್ಣು ತರಕಾರಿ ಮಾರಾಟ ಮುಂತಾದ ಸಣ್ಣ ಪುಟ್ಟ ವ್ಯಾಪಾರದಲ್ಲಿ ತೊಡಗಿದ್ದಾರೆ. ಒಟ್ಟಾರೆ ಇವರ ಆರ್ಥಿಕ ಸ್ಥಿತಿ ಅಭದ್ರತೆಯಿಂದ ಕೂಡಿರುವುದು ಸಂಶೋಧನೆಯಿಂದ ತಿಳಿದ ಫಲಿತವಾಗಿದೆ.

೩. ಬುಡ್ಗ ಜಂಗಮ ಸಮುದಾಯವು ಆಧುನಿಕತೆಯ ಸೆಳೆತಕ್ಕೆ ಸಿಲುಕಿ ತಮ್ಮ ಪಾರಂಪರಿಕ ಕಲೆಗೆ ಪ್ರೋತ್ಸಾಹ ಇಲ್ಲದಂತಹದಾಗಿದೆ. ಪ್ರಸ್ತುತ ದಿನಮಾನಗಳಲ್ಲಿ ಸಿನಿಮಾ, ದೂರದರ್ಶನದಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳಿಗೆ ಜನರು ಹೆಚ್ಚಿಗೆ ಒಲವು ಕೊಡುತ್ತಿರುವುದರಿಂದ ಇವರ ಕಲೆ ಮೂಲೆಗುಂಪಾಗುತ್ತದೆ. ಅದರಿಂದ ಕಲೆಯನ್ನೆ ಜೀವನಾಧಾರವಾಗಿಸಿಕೊಂಡಿದ್ದ ಇವರ ಜೀವನ ಸಂಕಷ್ಟದಲ್ಲಿ ಬದುಕಲು ಈ ಸಮುದಾಯವು ತನ್ನ ಮೂಲವೃತ್ತಿಯನ್ನು ಬಿಟ್ಟು ಪರ್ಯಾಯ ವೃತ್ತಿ ಗಮನಹರಿಸುತ್ತದೆ. ಇದರಿಂದ ಇವರು ಆರ್ಥಿಕತೆ ಸ್ವಲ್ಪ ಸುಧಾರಣೆ ಕಾಣಬಹುದು.

## ಸಲಹೆಗಳು

೧. ಅಲೆಮಾರಿ ಬುಡ್ಗ ಜಂಗಮ ಸಮುದಾಯವನ್ನು ನೆಲೆನಿಲ್ಲುವಂತೆ ಮಾಡುವ ಮತ್ತು ಮೂಲಭೂತ ಸೌಕರ್ಯಗಳನ್ನು ಒದಗಿಸುವ ಕಾರ್ಯ ಸರಕಾರ ಮಾಡಬೇಕಾಗಿದೆ.

೨. ಅಲೆಮಾರಿ ಸಮುದಾಯಗಳ ಅಭಿವೃದ್ಧಿಗೆ ಈಗಾಗಲೇ ಸರಕಾರ ಕೈಗೊಂಡಿರುವ ಯೋಜನೆ ಅಥವಾ ಕಾರ್ಯಕ್ರಮಗಳ ಬಗ್ಗೆ ಸಮುದಾಯದವರಲ್ಲಿ ಅರಿವು ಮೂಡಿಸುವ ಕಾರ್ಯ ಇಂದಿನ ವಿದ್ಯಾವಂತ ಯುವಕರು, ಸಂಶೋಧಕರು, ಸಂಘ ಸಂಸ್ಥೆಗಳು ಮಾಡಬೇಕಾಗಿದೆ.

೩. ಸರಕಾರದ ಯೋಜನೆಗಳನ್ನು ಪಡಿದುಕೊಳ್ಳುವುದಕ್ಕಾಗಲಿ ತಮ್ಮ ಬೇಡಿಕೆಗಳನ್ನು ಸರಕಾರಕ್ಕೆ ಮನವಿ ಮಾಡಿಕೊಳ್ಳುವುದಕ್ಕಾಗಲಿ ಇವರು ಮುಂದಾಗಬೇಕಾದರೆ ಮೊದಲು ಇವರು ಶಿಕ್ಷಣ ಕಲಿಯುವ ಅವಶ್ಯಕತೆ ಇದೆ. ಅದರಿಂದ ಸಮುದಾಯದ ಪ್ರತಿಯೊಬ್ಬರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ಮುಂದಾಗಬೇಕಾಗಿದೆ.

೪. ಯಾವುದೇ ಆರ್ಥಿಕ ಭದ್ರತೆಯನ್ನು ಹೊಂದಿರದೆ ಇವರಿಗೆ ಸರಕಾರ ಭೂಮಿಯನ್ನು ನೀಡುವುದರ ಮೂಲಕ ಅಥವಾ ಬೇರೆ ಸಣ್ಣ ಪುಟ್ಟ ವ್ಯಾಪಾರಗಳಿಗೆ ನೆರವು ನೀಡುವುದರ ಮೂಲಕ ಆರ್ಥಿಕ ಭದ್ರತೆ ಒದಗಿಸುವುದಾಗಿದೆ.



# ಅನುಬಂಧ

## ಪ್ರಶ್ನಾವಳಿ

**ಯೋಜನಾ ವರದಿ ತಯಾರಿಕೆಯ ಪ್ರಶ್ನಾವಳಿ**

**ಸಂಶೋಧನಾ ಪ್ರಶ್ನಾವಳಿಗಳು**

೧. ನಿಮ್ಮ ವೃತ್ತಿಯಿಂದ ಕುಟುಂಬದ ಆರ್ಥಿಕ ಸ್ಥಿತಿ ಹೇಗಿದೆ?

ಅ. ಉತ್ತಮವಾಗಿದೆ ( ) ಆ. ಉತ್ತಮವಾಗಿಲ್ಲ ( )

೨. ನಿಮ್ಮ ಮಕ್ಕಳಿಗೆ ಭವಿಷ್ಯದಲ್ಲಿ ಇದೆ ವೃತ್ತಿಯನ್ನು ಮುಂದುವರಿಸಲು ಬಯಸುತ್ತೀರಾ?

ಅ. ಹೌದು ( ) ಆ. ಇಲ್ಲ ( )

೩. ನಿಮ್ಮ ಮನೆತನದ ದೇವರು ಯಾವುವು?

ಅ. ಜಂಬಲಮ್ಮ ಆ. ದುರ್ಗಾದೇವಿ ಇ. ಮಾರಮ್ಮ ಈ. ಮಲ್ಲಮ್ಮ

೪. ಯಾವುದಾದರು ಸಾಮಾಜಿಕ ಸಂಘಟನೆಯಲ್ಲಿ ನಿಮ್ಮನ್ನು ತೊಡಗಿಸಿಕೊಂಡಿದ್ದೀರಾ?

ಅ. ಹೌದು ( ) ಆ. ಇಲ್ಲ ( )

೫. ನಿಮ್ಮ ಆರೋಗ್ಯದ ಸ್ಥಿತಿಗತಿ ಹೇಗಿದೆ?

ಅ. ಚೆನ್ನಾಗಿದೆ ( ) ಆ ಚೆನ್ನಾಗಿಲ್ಲ ( )

೬. ದೀರ್ಘ ಕಾಲದಿಂದ ನೀವು ಯಾವುದಾದರು ಖಾಯಿಲೆಯಿಂದ ಬಳಲುತ್ತಿದ್ದೀರಾ?

ಅ. ಹೌದು ( ) ಆ. ಇಲ್ಲ ( )

೭. ನಿಮ್ಮ ಕುಟುಂಬಕ್ಕೆ ಯಾವುದಾದರು ಸರ್ಕಾರಿ ಸೌಲಭ್ಯಗಳು ದೊರಕಿದೆಯೇ?

ಅ. ಸಿಕ್ಕಿದೆ ( ) ಆ. ಸಿಕ್ಕಿಲ್ಲ ( ) ಇ. ಗೊತ್ತಿಲ್ಲ ( )

೮. ನಿಮ್ಮ ಸಮುದಾಯದಲ್ಲಿ ಸಮಸ್ಯೆಗಳಿವೆಯೇ?

ಅ. ಹೌದು ( ) ಆ. ಇಲ್ಲ

೯. ಪಶುಸಂಗೋಪನ ಇಲಾಖೆಯಿಂದ ನಿಮಗೇನಾದರು ಸಲಹೆ ಮತ್ತು ಸಹಾಯಗಳು ಸಿಗುತ್ತಿವೆಯೇ?

ಅ. ಹೌದು ( ) ಆ. ಇಲ್ಲ ( )

೧೦. ನೀವು ಪ್ರತ್ಯೇಕ ಸಂಘಟನೆಗಳನ್ನು ಕಟ್ಟಿಕೊಂಡಿದ್ದೀರಾ?

ಅ. ಹೌದು ( ) ಆ. ಇಲ್ಲ ( )

೧೧. ನೀವು ಯಾವುದಾದರು ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟಿದ್ದೀರಾ?

ಅ. ಹೌದು ( ) ಆ. ಇಲ್ಲ ( )

೧೨. ನಿಮ್ಮ ಮಕ್ಕಳನ್ನು ಶಾಲೆಗೆ ಕಳುಸುತ್ತಿರುವಿರಾ?

ಅ. ಹೌದು ( ) ಆ. ಇಲ್ಲ ( )

೧೩. ನೀವು ಎಲ್ಲಿಯವರೆಗೆ ಶಿಕ್ಷಣವನ್ನು ಪಡೆದುಕೊಂಡಿದ್ದೀರಾ?

ಅ. ೦-೫ ಆ. ೫-೧೦ ಇ. ೧೦-೧೨ ಈ. ಡಿಗ್ರಿ-ಪಿಜಿ

೧೪. ನಿಮ್ಮ ಹತ್ತಿರದಲ್ಲಿ ಅಂಗನವಾಡಿ ಸೌಲಭ್ಯವಿದೆಯೇ?

ಅ. ಇದೆ ( ) ಆ. ಇಲ್ಲ ( )

೧೫. ನಿಮಗೆ ಕುಡಿಯುವ ನೀರಿನ ಸೌಲಭ್ಯವಿದೆಯೇ?

ಅ. ಇದೆ ( ) ಆ. ಇಲ್ಲ ( )

೧೬. ನಿಮ್ಮ ಜನರಿಗೆ ವಸತಿ ಸೌಲಭ್ಯವಿದೆಯೇ?

ಅ. ಇದೆ ( ) ಆ. ಇಲ್ಲ ( )

೧೭. ನಿಮ್ಮ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಸುತ್ತಿರುವಿರಾ?

ಅ. ಹೌದು ( ) ಆ. ಇಲ್ಲ ( )

೧೮. ಬುಡ್ಗ ಜಂಗಮ ಸಮುದಾಯದ ಮಕ್ಕಳ ಖಾಸಗಿ ಶಾಲೆಗಳಲ್ಲಿ ಅಭ್ಯಾಸ ಮಾಡುತ್ತಿದ್ದಾರೆಯೇ?

ಅ. ಹೌದು ( ) ಆ. ಇಲ್ಲ ( )

೧೯. ನಿಮ್ಮ ಮಕ್ಕಳಿಗೆ ಪೋಲಿಯೋ ಲಸಿಕೆ ಹಾಕಿಸಿದ್ದೀರಾ?

ಅ. ಹೌದು ( ) ಆ. ಇಲ್ಲ ( )

೨೦. ನಿಮ್ಮ ಸಮುದಾಯದಲ್ಲಿ ಯಾವುದಾದರು ಸರ್ಕಾರಿ ನೌಕರಿ ಪಡೆದುಕೊಂಡಿದ್ದಾರೆಯೇ?

ಅ. ಹೌದು ( ) ಆ. ಇಲ್ಲ ( )

೨೧. ನಿಮ್ಮ ಸಮುದಾಯದಲ್ಲಿ ಪ್ರಬಲವಾದ ರಾಜಕೀಯ ವ್ಯಕ್ತಿಗಳು ಇರುವರೇ?

ಅ. ಹೌದು ( ) ಆ. ಇಲ್ಲ ( )

೨೨. ನಿಮ್ಮ ಪಕ್ಕದಲ್ಲಿ ಯಾವುದಾದರು ಸರ್ಕಾರಿ ಆಸ್ಪತ್ರೆ ಇರುವುದೇ?

ಅ. ಇದೆ ( ) ಆ. ಇಲ್ಲ ( )

೨೩. ನಿಮ್ಮ ವಾರ್ಷಿಕ ಆದಾಯ ಎಷ್ಟು?

ಅ. ೧೦೦೦೦ ( ) ಆ. ೧೫೦೦೦ ( ) ಇ. ೨೦೦೦೦ ( ) ಈ. ೨೫೦೦೦ ( )

೨೪. ನೀವು ಭೂಮಿಯನ್ನು ಹೊಂದಿದ್ದೀರಾ?

ಅ. ಹೌದು ( ) ಆ. ಇಲ್ಲ ( )

೨೫. ನಿಮ್ಮಲ್ಲಿ ಪಡಿತರ ಕಾರ್ಡ್ ಹೊಂದಿದ್ದೀರಾ?

ಅ. ಇದೆ ( ) ಆ. ಇಲ್ಲ ( )

೨೬. ನಿಮ್ಮ ಸಮುದಾಯದಲ್ಲಿ ಬಾಲ್ಯ ವಿವಾಹ ಪದ್ಧತಿ ಜಾರಿಯಲ್ಲಿ ಇದೆಯೇ?

ಅ. ಇದೆ ( ) ಆ. ಇಲ್ಲ ( )

೨೭. ನಿಮಗೆ ಬ್ಯಾಂಕುಗಳ ಸೌಲಭ್ಯದ ಬಗ್ಗೆ ತಿಳುವಳಿಕೆ ಇದೇನಾ?

ಅ. ಇದೆ ( ) ಆ. ಇಲ್ಲ ( )

೨೮. ನೀವು ಮತದಾರರ ಐಡಿ ಕಾರ್ಡ್ ಹೊಂದಿದ್ದೀರಾ?

ಅ. ಹೌದು ( ) ಆ. ಇಲ್ಲ ( )

೨೯. ನಿಮ್ಮ ಸಮುದಾಯದ ಹಿರಿಯರು ಸರ್ಕಾರದ ವೃದ್ಯಾಪ ವೇತನವನ್ನು ಪಡೆದುಕೊಂಡಿದ್ದಾರೆಯೇ?

ಅ. ಹೌದು ( ) ಆ. ಇಲ್ಲ ( )

೩೦. ನಿಮ್ಮ ಸಮುದಾಯದಲ್ಲಿ ವಿಧವೆ ಮಹಿಳೆಯರು ಸರ್ಕಾರ ಕೊಡಲ್ಪಡುವ ವಿಧವೆ ವೇತನವನ್ನು ಪಡೆಯುತ್ತಿದ್ದಾರೆಯೇ?

ಅ. ಹೌದು ( ) ಆ. ಇಲ್ಲ ( )

# ಪರಾಮರ್ಶನ ಗ್ರಂಥಗಳು

೧. ಆರಾಧ್ಯ ಬಿ.ಎಂ.ಎಂ., ೧೯೫೮, ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಅಪ್ಪು ಪ್ರಕಾಶನ, ರಾಜಾಜಿನಗರ ಬೆಂಗಳೂರು.

೨. ಬಾಲಗುರುಮೂರ್ತಿ ಪ್ರತಾಪ್ ಆರ್ ಬಹುರೂಪಿ, ೨೦೦೮, ಬುಡ್ಗ ಜಂಗಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩. ಮೇತ್ರಿ ಕೆ.ಎಂ. (ಸಂ), ಹಿರೇಮಠ ಎಸ್.ಎಸ್. (ಲೇ), ೨೦೦೫, ಬುಡ್ಗ ಜಂಗಮ ದರ್ಶನಿ, ವಿದ್ಯಾನಿಧಿ ಪ್ರಕಾಶನ, ಗದಗ.

೪. ಯಳನಾಡು ಆಂಜಿನಪ್ಪ, ೧೯೯೩, ಹಗಲುವೇಷದವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫. ವೆಂಕನಗೌಡ, ೨೦೦೨, ಬಳ್ಳಾರಿ ಮತ್ತು ಆಂಧ್ರ ಗಡಿಭಾಗದ ಹಗಲುವೇಷಗಾರರು ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗ.

೬. ಶಿರೂರ ಬಿ.ವಿ., ೨೦೦೬, ಕೊಪ್ಪಳ ಜಿಲ್ಲಾ ದರ್ಶನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭. ಸಾರಿಕದೇವಿ, ೨೦೦೬, ಬುರ್ರಕಥೆ ಈರಮ್ಮ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗ.

೮. ಸೂರ್ಯನಾಥ ಯು. ಕಾಮಥ್, ೨೦೦೧, ಕರ್ನಾಟಕದ ಸಾಂಸ್ಕೃತಿಕ ಚರಿತ್ರೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೯. ಮಾಹಿತಿ ಪ್ರಜಾವಾಣಿ (೧೮-೦೩-೨೦೦೩)

೧೦. ಕೃಪೆ: ಪ್ರಜಾವಾಣಿ ೬.೧೦.೨೦೦೪

೧೧. ಮಾಹಿತಿದಾರರು ಅಶೋಕ ಗಟ್ಟಪನವರು ಕುದರಿಮೋತಿ ಗ್ರಾಮ

೧೨. www.koppal nic.in march 2008 ಅಂತರಜಾಲ ಮಾಹಿತಿ

೧೩. www. koppal nic.in ಅಂತರಜಾಲ ಮಾಹಿತಿ

೧೪. www. koppal nic.in. koppal district profil

# ಛಾಯಾಚಿತ್ರಗಳು



ಬುಡ್ಗ ಜಂಗಮ ಸಮುದಾಯದೊಂದಿಗೆ ಚರ್ಚೆ



ಬುಡ್ಗ ಜಂಗಮ ಸಮುದಾಯದ ಮಹಿಳೆಯರೊಂದಿಗೆ ಮಾಹಿತಿ ಸಂಗ್ರಹ



ಬುಡ್ಗ ಜಂಗಮ ಗ್ರಾಮ ಕುದರಿಮೋತಿ



ಬುಡ್ಗ ಜಂಗಮ ಸಮುದಾಯದ ಮುಖಂಡರೊಂದಿಗೆ ಸಮಾಲೋಚನೆ

